# ಕೊರವಂಜಿ

*Korav.anji*

ಫೆಬ್ರುವರಿ

೧೯೫೯



ಸಂಪಾದಕರು

ಶ್ರೀ॥ ರಾ. ಶಿ.

ಬರಹಗಾರರು :

ಡಾ॥ ಶರಥಿ ದೀಕ್ಷಿತ್
ಶ್ರೀ॥ ಪ್ರಸಾದ್
ಶ್ರೀ॥ ಕುಮಾರ್
ಶ್ರೀ॥ ಪಾಪಿ
ಶ್ರೀ॥ ಕೇಫ
ಶ್ರೀ॥ ಪಾಟಾಳಿ
ಶ್ರೀ॥ ಅ. ರಾ. ಸೆ.
ಶ್ರೀ॥ ಪಾಪ.
ಶ್ರೀ॥ ರಾಮಿ
ಶ್ರೀ॥ ಟಿ. ಕೆ. ಎಸ್. ಐಯ್ಯಂಗಾರ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ
ಕೇವಲ ನಾಲ್ಕಾಣೆ

ತಿಳಿನಗೆಯ ಮಾಸಪತ್ರಿಕೆ

ಬೆಂಗಳೂರು :

ಸ್ಟೇಟ್ಸ್ ★ ಶ್ರೀ
(ತೆಲುಗು) (ತಮಿಳು)

ಮೈಸೂರು : ಪ್ರಭಾ (ತಮಿಳು)
ಕೆ. ಜಿ. ಎಫ್. : ಕೃಷ್ಣ (ತಮಿಳು)
ಚಿತ್ರದುರ್ಗ : ಯೂನಿಯನ್ (ತೆಲುಗು)

ಜನವರಿ 30 ರಿಂದ ಪ್ರಾರಂಭ..





ವಿಜಯಾ ರವರ..

ಕಡನ್‌ವಾಂಗಿ ಕಲ್ಯಾಣಂ
...ತಮಿಳು.

ಅಪ್ಪುಚೇಸಿ ಪಪ್ಪುಕೂಡು
...ತೆಲುಗು...

ನಿರ್ದೇಶನ ಪ್ರಸಾದ್
ನಿರ್ಮಾಪಕರು. ನಾಗಿರೆಡ್ಡಿ-ಚಕ್ರಪಾಣಿ





ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್ ರಿಲೀಸ್...

ಕಟಕ

ಫೆಬ್ರುವರಿ ಬಿಡುಗಡೆ




ನಿರ್ಮಾತ–ನಿರ್ದೇಶಕ: **ಬಿ. ಎಸ್. ರಂಗ**

ಹಂಚಿಕೆ:

ವಿಕ್ರಮ್ ಪಿಕ್ಚರ್ಸ್, ಗಾಂಧಿನಗರ, ಬೆಂಗಳೂರು-೯




ಸಂಪುಟ ೨೦ ಫೆಬ್ರುವರಿ ೧೯೫೯ ಸಂಚಿಕೆ ೧೧

## ಕುಹಕಿಡಿಗಳು

---

ಲೋಕ ಶಿಕ್ಷಣ ಸಮಿತಿಯ Soul Trustee, ಶ್ರೀ ದಿವಾಕರರಂತೆ.

* * *

ನಾಗಪುರದ ಅಧಿವೇಶನದಲ್ಲಿ ಕಾಂಗ್ರೇಸಿನ ಹುರಿಯಾಳುಗಳು ಪಾದಯಾತ್ರೆ ಮಾಡಬೇಕೆಂದು ಒಮ್ಮತದ ನಿರ್ಣಯವಾಯಿತಂತೆ.

—ನಮ್ಮ ಮಾಜಿ ಸಚಿವರುಗಳು ಈಗಾಗಲೇ ಪಾದಯಾತ್ರೆ ಮಾಡುತ್ತಿದಾರಲ್ಲ ರಸ್ತೆರಸ್ತೆಯಲ್ಲೂ—

* * *

ಸಂಯುಕ್ತ ಕರ್ಣಾಟಕದ ದಿವಾಕರನು, ಚೆಲುವ ಕನ್ನಡನಾಡು, ಉದಯವಾಗಲಿ ಎಂಬ ಗೋಳು ಹುಯಿಲಿಟ್ಟ ಮೇಲೆ, ಉದಯವಾದ ಸ್ವಲ್ಪ ಕಾಲದ ಮೇಲೆ, ಬೆಂಗಳೂರಿನಲ್ಲಿ ಉದಯಿಸಿದನಂತೆ.

—ಏಕವಚನ! ಮಾಫಿಯಾಗಬಹುದು ಅಲ್ಲವೇ!

* * *

ಜಾಮಾತಾ ದಶಮ ಗ್ರಹಾ ಎಂದು ಹೇಳುವುದನ್ನು ರಷ್ಯನ್ನರು ದಶಮಗ್ರಹವನ್ನು ಸೃಷ್ಟಿಸಿದ ಕಾರಣ ಜಾಮಾತಾ ಏಕಾದಶಮಗ್ರಹಾ ಎಂದು ಮಾರ್ಪಡಿಸುತ್ತಾರಂತೆ.

— ನ್ಯಾಯ! ಜಾಮಾತಾ ಏಕಾದಶಿಗೆ ಕಾರಣವಲ್ಲವೇ?

* * *

ಮೊದಲ ಮಗುವಾದಾಗ, ಒಡವೆ ಅಂಗಡಿಗೆ ಓಡಿದನಂತೆ
ಎರಡನೆ ಮಗುವಾದಾಗ, ಬಟ್ಟೆ ಅಂಗಡಿಗೆ ಓಡಿದನಂತೆ
ಮೂರನೆ ಮಗುವಾದಾಗ, ದಿನಸಿ ಅಂಗಡಿಗೆ ಓಡಿದನಂತೆ
ನಾಲ್ಕನೆಯದಾದಾಗ, ಜ್ಯೋತಿಷ್ಯನ ಬಳಿಗೋಡಿನಂತೆ
ತಂದೆ—ಗಣರಾಜ್ಯದಲ್ಲಿ.

* * *

ಜನವರಿ ೨೬ – ಗಣರಾಜ್ಯ ಸ್ಥಾಪನೆ!
ಜನವರಿ ೩೦ – ರಾಷ್ಟ್ರಪಿತನ ಕೊಲೆ

— Oscar Wilde—you kill the thing you love most
ಈಗ ಅರ್ಥವಾಗಬಹುದು—ಆಧ್ಯಾತ್ಮಿಕ ಸಂದೇಶ—ಅಹಂ ನಿರ್ಮೂಲ.

* * *

ದೆಹಲಿಯಲ್ಲಿ ನಡೆಯುತ್ತಿರುವ ಐದನೆ ಟೆಸ್ಟ್ ಪಂದ್ಯವನ್ನು ಕ್ರಿಕೆಟ್ ಎಂದು ಕರೆಯುವುದಕ್ಕಿಂತ, ಸೂರ್ ಚೆಂಡು ಎಂದು ಕರೆಯುವುದು ಸರಿ ಎನ್ನಿಸುತ್ತದೆ ಅಲ್ಲವೆ?

* * *

ಅಣುಶಕ್ತಿಯ ಭಾಭಾರವರ ಮನೆಯಲ್ಲಿ ಬೇಗ ಚಹಾ ಮಾಡಲಿಕ್ಕೆಂದು, ಅಡಿಗೆಯಾಕೆ ಬೇಗ ಬೆರಣಿ ಒಲೆ ಹಚ್ಚಿದಳಂತೆ.

* * *

ಚೀನಾ ದೇಶದ ಪ್ರಾಚೀನ ವೈದ್ಯ ಪದ್ಧತಿಯಲ್ಲಿ ಅಂಗೈಯಲ್ಲಿ ಚುಚ್ಚಿದರೆ, ಹಲ್ಲುನೋವು ವಾಸಿಯಾಗುತ್ತಂತೆ.

—ಏನು ಮಹಾ! ಪೀಕಿಂಗ್‌ನಲ್ಲಿ ಮಾವೊತ್ಸೆ ಗುರುಗುಟ್ಟಿದರೆ, ಕ್ರುಶ್ಚೆವ್ ಕೂಡ ರಷ್ಯಾದಲ್ಲಿ, ಟೀಟೋ ಮೇಲೆ ರೇಗುತ್ತಾರೆ!

* * *

ಅಚ್ಚುಮೆಚ್ಚಿನ ಹೆಣ್ಣಿನ ಮೊದಲ ಮಗಳ ಮದುವೆಯ ಸಲುವಾಗಿ, ತಲಾ ನೂರು ರೂಪಾಯಿಗಳನ್ನು ಎರಡು ಅನಾಥಾಲಯಕ್ಕೆ, ಶತಕೋಟಿ ಶ್ರೀಮಂತ ನಿಜಾಮರು ಉದಾರ ದಾನಮಾಡಿದರಂತೆ.

* * *

ಫ್ರಾನ್ಸಿನಲ್ಲಿ ವರಮಾನ ತೆರಿಗೆಯನ್ನು ಲೆಕ್ಕದ ಪ್ರಕಾರ ಕಂಡ ವರಮಾನದ ಮೇಲೆ ವಿಧಿಸುವುದಿಲ್ಲವಂತೆ—ಅದ್ಧಿಯ ಡೌಲು ನೋಡಿ ವಿಧಿಸುತ್ತಾರಂತೆ.

—ಹೀಗೇನಾದರೂ ನಮ್ಮ ದೇಶದಲ್ಲಿ ಆದರೆ, ನಿಜಾಮರು ಬದುಕಿಹೋಗಿ, ಸಿಸ್ತುಗಾರ ಪುಟ್ಟುಸ್ವಾಮಿಗಳು ಪಾಪರಾಗುತ್ತಾರೆ!

* * *

# ಕ್ವಿಸ್ ಕಾರ್ಯಕ್ರಮ

---

ನಮ್ಮ ಗ್ರಾಮದ ಪಟೇಲರ ವೊಮ್ಮಗ ಬೆಂಗಳೂರಲ್ಲಿ ಕಾಲೇಜು ಕಲಿಯುತ್ತಿರುವನು. ಅಲ್ಲಿಂದ "ರೇಡಿಯೋದಿಂದ ಕ್ವಿಸ್ ಕಾರ್ಯಕ್ರಮದಲ್ಲಿ ನಾನೂ ಇದೀನಿ, ಮುಂದಿನ ಶುಕ್ರವಾರ ನನ್ನ ಮಾತು ನೀವು ಕೇಳಬಹುದು" ಅಂತ ಅಜ್ಜನಿಗೆ ಕಾಗದ ಬರೆದ ಅಜ್ಜನದು ನಮ್ಮ ಗ್ರಾಮದಲ್ಲಿ ಸುಗ್ರೀವಾಜ್ಞೆ—ಪಂಚಾಯಿತಿ ಹಾಲೆಲ್ಲ ಸಾರ್ಸಿ ಗುಡ್ಸಿ ರಂಗೋಲಿ ಇಡ್ಸಿ, ತೋರ್ಣ ಕಟ್ಸಿ, ಶುಕ್ರವಾರ ಎಲ್ರೂ ಪಂಚಾಯಿತಿ ಹಾಲಿನಲ್ಲಿ ಪಟೇಲ್ರ ವೊಮ್ಮಗನ ಮಾತು ಕೇಳೋಕೆ ಬರಬೇಕೂಂತ ಡಂಗೂರ ಹೊಡೆಸಿಬಿಟ್ಟ. ಕೋರಿ ಜರಿ ರುಮಾಲು ಕಿಸೆ ಅಂಗಿ, ಜರ್ಕಿ ಎಕ್ಕಡ, ಎಲಡಿಕೆ, ಕೈಯ್ಯಲ್ಲಿ ಕೋಲು ಹಿಡ್ಕೊಂಡು ವೊಮ್ಮಗನ ಕೀರ್ತಿ ಪ್ರಸಾರಕ್ಕೆ ಆಜೆ ಈ ಹಳ್ಳಿಗಳಲ್ಲೆಲ್ಲಾ ಸ್ವಯಂ ಸಾರಿಬಂದ.

ಪಟೇಲರು ಅನೇಕ ಕಡೆ ಕೈಗಡ ಕೊಟ್ಟು ಓಟು—ಇತ್ಯಾದಿಗಳನ್ನು ಗ್ಯಾರಂಟಿಯಾಗಿ ಇಷ್ಟೂಂತ ಯಾರಿಗಾದರೂ ಕೊಡಿಸಬಲ್ಲವರು. ಪಟೇಲರು ಬಾಕಿ ಕೇಳಿಯಾರು ಅಂಬೊ ಅಂಜಿಕೆಯಿಂದ ಜನ ಶುಕ್ರವಾರ ಸಂಜೆ ಪಂಚಾಯ್ತಿಯ ಹಾಲು ತುಂಬಿಕೊಂಡರು. ಪಟೇಲರು ಭವ್ಯವಾದ ಬಿಳಿ ಮೀಸೆಗೆ ಮಲ್ಲಿಗೆ ಎಣ್ಣೆ ಸವರಿಕೊಂಡು ಗಮ್ಮತ್ತಿನಿಂದ ಡೋಲು ಒರಗಿ ಎಲೆ ಅಡಿಕೆ ಮೇಯುತ್ತಿದ್ದರು. ರೇಡಿಯೋ ಕೋಲಾಟದ ಪದ ಹೇಳುತ್ತಿತ್ತು.

"ಎಷ್ಟೆ ಆಗ್ಲಿ ಸಣ್ಣಪಟೇಲ್ರೂಂದ್ರೆ—ಮಿಡ್ನಾಗ್ರ" ಅಂದ ಒಬ್ಬ ಕಾಕಾಪುಡಿ.

ಪಟೇಲರು ನಕ್ಕು ಏನೋ ಹೇಳಲು ಹೊರಟು ಕೆಮ್ಮಿ ಸುಮ್ಮನಾದರು. "ಇದು ಆಕಾಶವಾಣಿ ಬೆಂಗಳೂರು—ಈಗ ಕ್ವಿಸ್ ಕಾರ್ಯಕ್ರಮ" ಎಂದು ರೇಡಿಯೋ ಬಾಯಿಬಿಟ್ಟಿತು. ಇಡೀ ಗ್ರಾಮವೇ ಬಾಯಿಬಿಟ್ಟು ಕುಳಿತಿತ್ತು ಪಟೇಲರ ವೊಮ್ಮಗನ ಬಾಯಿಮಾತು ಕೇಳಲಿಕ್ಕೆ. ಕಾರ್ಯಕ್ರಮ ನಡೆದಿತ್ತು. "ಭ್ರಕ್ರಾನಾಂಗಲ್ ಅಂದ್ರೇನು ? ಗೋಮಟೇಶ್ವರನ ಎತ್ತರ, ಫೌನಾ ಅಂದ್ರೇನು ? ಲೂನಿಕ್ ಅಂತಂದ್ರೆ ಯಾವ ಗ್ರಹ ?" ಇತ್ಯಾದಿ ಇತ್ಯಾದಿ. ಪಟೇಲರ ವೊಮ್ಮಗನ ಹೆಸರೇ ಬರಲಿಲ್ಲ—ಪಟೇಲರ ಹೆಸರೂ ಬರಲಿಲ್ಲ—"ಇಂಥವರ ವೊಮ್ಮಗಾಂತ ಬ್ಯಾಡವೆ?" ಅಂತ ಬೇಸರಿಸಿದ ಒಬ್ಬ ಭಕ್ತ. ಹೋಗಲಿ ಪಟೇಲರ ವೊಮ್ಮಗನ ಮಾತಾದ್ರೂ ಆದರಲ್ಲಿ ಕೇಳಿಸ

ಬಾರದೆ ?. ಉಹುಂ ...ರೇಗಿ "ಸಿಲ್ಲಿಓಬಿಡ್ರೊ—ನಮ್ಮ ನಂಜು ಓಗ್ನಿಲ್ವೋ ಏನೊ" ಎಂದು ಬಡಗಿ ಕುಟ್ಟುತ್ತಾ ಕೆಂಪು ರಸ ಪಿಚ್ ಎಂದು ಉಗುಳಿಹೋದರು.

ಮೂರುದಿನದ ಮೇಲೆ ಮೊಮ್ಮಗನ ಕಾಗದ ಬಂತು. ಅಜ್ಜಾ—ನಾನು ಹಿಂದೆ ಬರೆದಂತೆ ಕ್ವಿಜ್‌ನಲ್ಲಿ ಭಾಗವಹಿಸಿದ್ದೆ—ನೀವೂ ಅಜ್ಜಿಯೂ ಕೇಳಿರಬಹುದು - ನನ್ನ ಶಬ್ದ ನೀವು ಗುರುತು ಹಿಡಿದಿರೋ ಇಲ್ವೊ ಅನ್ನೊ ಅನುಮಾನ ಬಂದು ಈ ವಿವರ ಕೊಡುತ್ತಿದ್ದೇನೆ; ಕ್ವಿಜ್ ಕಾರ್ಯಕ್ರಮದಲ್ಲಿ ಅತಿಭಾರಿಯಾದ ಚಪ್ಪಾಳೆ ಸದ್ದು ನಂದೇ. ನೀವು ಕೇಳಲಿ ಎಂದು ಎಲ್ಲರೂ ನಕ್ಕಾಗ ನಾನು ಕೆಮ್ಮಿದೆ. ಗೋಮಟೇಶ್ವರನ ಎತ್ತರ ಅಂದಾಗ ಕೇಕೆ ಹೊಡೆದು ನಕ್ಕವನು ನಿಮ್ಮ ಮೊಮ್ಮಗನಾದ ನಾನೇ ಎಂದು ಹೆಮ್ಮೆಯಿಂದ ಹೇಳುತ್ತೇನೆ. ಆ ನಗು ನೀನು ನಂದೇ ಅಂತ ಗುರ್ತು ಹಿಡೀಲಿಲ್ಲವೆ ? ಕಡೆಯದಾಗಿ ಕಾರ್ಯಕ್ರಮ ಮುಗಿದಾಗ ಚಪ್ಪಾಳೆ ನಗು ನೆಡೆದಾಗ ಸಣ್ಣ ಸೀಟಿ ಕೇಳಿಸಲಿಲ್ಲವೆ? ಆ ಸೀಟಿ ನಂದೇ....ಆ ಸೀಟಿ ಗುರ್ತು ಹಿಡಿದಿರಾ ?.... ಎಂದು ಏನೇನೋ ಬರೆದು ಇತಿ ನಮಸ್ಕಾರ ಮಾಡಿದ್ದ. ಪಟೇಲ್ರು ಮೊಮ್ಮಗನ ರೇಡಿಯೋ ಕಾರ್ಯಕ್ರಮದ ವಿವರ ಗ್ರಾಮದಲ್ಲಿ ಮತ್ತೆ ಡಂಗೂರ ಹೊಡೆಸಿದ ಮೇಲೆ ಎಲ್ಲರೂ ಚಿಕ್ಕಪಟೇಲರ ರೇಡಿಯೋ ಶಬ್ದ ಕಂಡುಹಿಡಿದರು.

—ದಾಶರಥಿ ಧೀಕ್ಷಿತ್




"ಬಟ್ಟೆ ಇದ್ದಷ್ಟು ಕೋಟು ಹೊಲೆಸಿಕೊ" ಅನ್ನೊ ಗಾದೆ ನಂಬಿಬಿಟ್ಟೆ ಕಣೋ !

# ತುಳಸಾಬಾಯಿ ಎಳ್ಳು ಬೀರಿದ್ದು

---

ಮಕರ ಸಂಕ್ರಾಂತಿ. ಕಚೇರಿಗೆ ರಜಾ. ಬೆಳಿಗ್ಗೆ ಎದ್ದು ಸ್ನಾನ ಮಾಡಿ ಮೂರು ಮೈಲಿ ದೂರ ಇದ್ದ ಪುಸ್ತಕಾಲಯಕ್ಕೆ ಹೋಗಿ, ಶಂಕರಾಚಾರ್ಯರ ಪುಸ್ತಕ ಓದಿ ಹಿಂತಿರುಗಿ ನಡೆದು ಬಂದಿದ್ದೆ ಮನೆಗೆ, ಮಧ್ಯಾಹ್ನ ಒಂದು ಗಂಟೆಗೆ ಮನಸ್ಸಿನಲ್ಲಿ "ನಾನ್ಯಾರು, ಇದು ಯಾವುದು, ನೀವ್ಯಾರು, ಅದು ಇದೇ" ಎಂದೆಲ್ಲಾ ಯೋಚನೆಗಳು ಗಾಳಿಯಲ್ಲಿ ಹೊಗೆ ನಾಚು ಮಾಡಿದಂತೆ, ಸುಳಿದಾಡುತ್ತಿತ್ತು.

ಊಟಕ್ಕೆ ಕುಳಿತೆ. ದಿವನಾದ ಬಾಳೆ ಎಲೆ ಹಾಕಿತ್ತು ಆದರೆ ತೊಳೆದಿರಲಿಲ್ಲ ಅಂಟು ತ್ರೆಗೆದು ತೊಳೆಯೋ ಹೊತ್ತಿಗೆ, ಬೆರಳು ತೊಳೆಯಲು ಬಚ್ಚಲ ಮನೆಗೆ ಹೋಗಿ ಬರಬೇಕಾಯಿತು. ಎರಡು ಕೋಸುಂಬರಿ, ಎರಡು ಪಲ್ಯ, ಒಂದು ಗೊಜ್ಜು, ಉಪ್ಪೇರಿ, ಚಿತ್ರಾನ್ನ, ಒಂದು ಹುಳಿ ತೊವ್ವೆ, ಮಜ್ಜಿಗೆ ಹುಳಿ, ಸಾರು, ಅನ್ನ, ಒಬ್ಬಟ್ಟು, ಪಾಯಸ, ಆಂಬೊಡೆ, ಮೊಸರು. ಇದೇ ಹಬ್ಬದ ಅಡುಗೆಯು ಮಾಮೂಲು. ಕೋಸಂಬರಿಗೆ ಉಪ್ಪು ಹೆಚ್ಚು; ಪಲ್ಯಗಳು ಬೆಂದಿದ್ದು ಸಾಲದು; ಗೊಜ್ಜು ಘಾಟು; ಉಪ್ಪೇರಿ ಸಪ್ಪೆ, ಚಿತ್ರಾನ್ನ ವಿಚಿತ್ರ ರುಚಿ, ಸೀಮೆಯೆಣ್ಣೆ ವಾಸನೆ; ಹುಳಿ ತೊವ್ವೆಗೆ ಹುಳಿ ಹೆಚ್ಚು; ಮಜ್ಜಿಗೆ ಹುಳಿ ಪರಂಗಿಕಾಯಿ ನದು; ಸಾರು ಗದರು, ಅನ್ನ ಮೆಡ್ಡಿ, ಒಬ್ಬಟ್ಟು ಅಂಚು ಹರಿತ; ಪಾಯಸಕ್ಕೆ ಜ್ವರದ ಕಳೆ, ಆಂಬೊಡೆ ಸೀದಿತ್ತು. ಮೊಸರಲ್ಲಿ ಕಲ್ಲು ಸಿಕ್ಕಿತು. ನೆಂಜಿಕೊಳ್ಳಲು ಉಪ್ಪಿನಕಾಯಿಲ್ಲ. ಕಡೆಗೆ ನೀರು ಕುಡಿಯಲು ಲೋಟಕ್ಕೆ ಕೈ ಹಾಕಿದರೆ, ಹುಣಿಸೆ ಹಣ್ಣಿನ ಚರಟ ಬೆರಳಿಗೆ ಅಂಟಿಕೊಂಡಿತು.

ಮಕರನಂತೆ ಮನಸ್ಸಿನಲ್ಲಿ ಹಾರಾಡುತ್ತಾ ಆದರೂ ನಗುತ್ತಾ, ಹಾಗೂ ತೇಗುತ್ತಾ ಎದ್ದು ಕೈ ತೊಳೆದುಕೊಂಡು, ಹಾಸಿದ ಹಾಸಿಗೆಯನ್ನು ಸರಿಮಾಡಿ ಕೊಂಡು ಮಲಗಿದೆ. ಎಂತಹ ನಿದ್ರೆ ಬಂತು ಅಂತೀರೀ ? ಕನಸು ಕೂಡ ಇಲ್ಲದ ನಿದ್ರೆ.

ಐದು ಗಂಟೆಗೆ ಎದ್ದೆ. ಹಾಸಿಗೆ ಸುತ್ತಿದೆ ಮುಖ ತೊಳೆದುಕೊಂಡು ಬಂದೆ. ಕಾಫೀಗೆ ಕಾಯುವಾಗ ಸಂಜೆ ಏನು ಮಾಡೋದು ಅಂತ ಯೋಚಿಸುತ್ತಾ ಇದ್ದೆ.

ಒಂದು ತಟ್ಟೆ ಎಳ್ಳು, ಒಂದು ಬಟ್ಟಲು ಕಾಫಿ, ಒಂದು ಸಕ್ಕರೆ ಅಚ್ಚು, ತಂದಿಟ್ಟಳು ನನಗೆ ಕೈ ಕೊಟ್ಟಾಕೆ.

ಆಗ ಶಾಂತಿ ದೂರವಾಯ್ತು. ರೇಗಿಯೇಬಿಟ್ಟೆ, ಮಾಡಿದ ಊಟ ವರ್ಣಿಸಿದೆ. ಸಿಹಿ ಎಳ್ಳು, ಸಕ್ಕರೆ ಅಚ್ಚು ತಿಂದು ಕಾಫಿ ಕುಡಿದರೆ, ಕೈಯೆಣ್ಣೆ ಕುಡಿದಂತಾಗು ಲ್ಲವೇ? ಎಂದೆಲ್ಲಾ ರೇಗುತ್ತಾ ಅಂದು, ಕಾಫಿ ಕುಡಿದೆ. ಆ ಕಹಿಯನ್ನು ತಾಳ ಲಾರದೆ ಮೊದ್ದು ಮೊದ್ದಾಗಿದ್ದ ಸಕ್ಕರೆ ಅಚ್ಚನ್ನು ಕಟಕಾರಿಸಿ ತಿಂದೆ.

ಆಗ ಕೋಮಲವಾಣಿಯು ಕೇಳಿಸಿತು. ಜೀಜಾಬಾಯಿ! ಜೀಜಾಬಾಯಿ!

ಈಕೆ ಓಡಿ ಹೋಗಿ ಬಾಗಿಲು ತೆಗೆದಳು. ಎಳ್ಳು ಬೀರುಕ್ಕೆ ತುಳಸಾಬಾಯಿ ಬಂದಿದ್ದಳು. ಲೆಕ್ಕದ ಮಾಸ್ತರ ಹೆಂಡತಿ ಆಕೆ. ಗಣಿತದ ಪ್ರೊಫೆಸರ ಮಗಳಾಕೆ. ನೋಡಲು ಚೆಂದ ನಡೆದರೆ ಚೆಂದ, ಮಾತಾಡಿದರಂತೂ ಬಲು ಅಂದ. ಬಳ್ಳಿಯ ತೆರದಲಿ ಹರಿದಳು ಆಕೆ. ಸರಪರ ಸುಯ್ಯೆಂದಿತು ಸೀರೆ, ಮೆಲ್ಲಗೆ ನಕ್ಕಳು ತಟ್ಟೆಯ ನೆತ್ತಿ. ಎಳ್ಳನು ಬೀರಿದಳಾಕೆ. ಎಂತಹ ವಾರಣ, ಎಂತಹ ವೈನ, ಸಂತಸ ತುಂಬುವ ನಡೆನುಡಿಯಾಕೆ.

*　　　*　　　*

ನನ್ನ ಕೈಗೆ ಪ್ರಾಯದಲ್ಲೇ ಕೈ ಕೊಟ್ಟ ಜೀಝೂಬಾಯಿ ಕುಂಕುಮದ ಭರಣಿಯನ್ನೂ ತುಳಸಾಬಾಯಿಯೆದುರಿಗೆ ಹಿಡಿದಳು. ಕೋಮಲ ಬೆರಳುಗಳಿಂದ ಕುಂಕುಮವನ್ನು ತುಸು ತೆಗೆದುಕೊಂಡು ಹಾಲು ಹಣೆಯಮೇಲೆ ಏನೆಲ್ಲಾ ವಂಕಿನಿಂವ ತುಳಸಾಬಾಯಿ ಇಟ್ಟುಕೊಂಡಳು ಅಂತೀರೀ!

ಆಕೆ ಕೊಟ್ಟ ಕುಂಕುಮವನ್ನು ತನ್ನ ಹಣೆಗೆ ಇಟ್ಟುಕೊಂಡಾಗ. ನದಿಯು ಹರಿವಂತೆ. ನವಿಲು ಕುಣಿವಂತೆ, ಎಳ್ಳು ಬೀರಿ ತುಳಸಾಬಾಯಿ ಹೊರಟುಹೋದಳು.

ಆಕೆ ಬೀರಿದ ಎಳ್ಳನ್ನೂ, ತಟ್ಟೆಯನ್ನಲುಗಾಡಿಸಿದೆ. ಜೀಝೂಬಾಯಿ ಕೊಠಡಿಗೆ ಬಂದು ನನ್ನೆದುರಿಗೆ ಇರಿಸಿದಳು "ಇದಾದರೂ ರುಚಿಯಾಗಿರುತ್ತೇನೋ ತಿಂದು ಸವಿಯುರಿ ಅಂದ್ರೆ" ಎಂದನ್ನುತ್ತಾ.

ತಟ್ಟೆಯಲ್ಲಿದ್ದ ಒಂದೊಂದು ಎಳ್ಳಿನ ಕಾಳೂ ಶೃಂಗಾರಮಯವಾಗಿತ್ತು. ಒಂದು ನೂರಿರಬಹುದು. ಕೊಬ್ಬರಿ ಚೂರುಗಳೆಲ್ಲಾ ಟೆಕ್ನಿಕಲರ್ ಮಯ ಆದರೆ ಒಂದು ತುದಿಯಲ್ಲಿ ಒಣ್ಣದ ಕಾಗದದ ನವ್ಯ ಲಕ್ಕೋಟೆ. ಲಕ್ಕೋಟೆಯ ಕತ್ತಿಗೆ ಗುನ್ನಾಂ ಪಟ್ಟೆಯ ಚಿನ್ನದ ತಾಳಿ.

ಲಕ್ಕೋಟೆಯನ್ನು ಕೈಗೆ ತೆಗೆದುಕೊಂಡೆ. ಬಂಧನ ಬಿಡಿಸಿದೆ ಅಂಗೈಯಲ್ಲಿ ಹಾಕಿಕೊಂಡೆ ಅದರಲ್ಲಿದ್ದುದನ್ನು – ಕುಸುರಿಕಾಳು. ಏನೆಲ್ಲಾ ಚೆಂದ. ಎಷ್ಟೆಲ್ಲಾ ಅಂದ. ಅಣುವಿನ ಅಭ್ಯಂತರದಲ್ಲೂ ಎಂತೆಂತ ಸೊಬಗು. ಬಾಯಿಗೆ ಹಾಕಿಕೊಂಡೆ. ಮುಕ್ಕಿ ಬಿಡೋಣ ಅಂತ. ಹಾಕಿಕೊಂಡೆ ಅಗಿದೆ—ಉಗಿದೆ. ಇನ್ನೂ ಉಗಿಯುತ್ತಿದೇನೆ ಕುಸರೀ ಕಾಳು, ಸಕ್ಕರೆಯದಲ್ಲ—ಮೊಂಬತ್ತಿಯಿಂದ ತಯಾರಾದ್ದು.

—ಪ್ರಸಾದ್

# ಅರ್ಧ ದಾನೇಶ್ವರ?

(ಕ್ರುಶ್ಚೇವ್)

( ವಿ. ಸೀ. ಯವರ ಕ್ಷಮೆಬೇಡಿ)

ಕಂಡವರು ಕಾಣದರು ವರ್ಣಿಸುವರೈ ನಿನ್ನ
ಇಂತೆಂದು ಅಂತೆಂದು ಅಂತಲ್ಲವೆಂದು
ಎಲ್ಲ ವರ್ಣನೆಗಳಿಗು ವಿಸ್ತಾರದಂತಿರುವೆ ನೀ
ವರ್ಣಿಪರ ಕೌತುಕವ ಪೆರ್ಚಿಸುತಿರುವೆ.

ಒಮ್ಮೆ ಮೊಗ ಕಂಡವರು ಕಠಿಣವನೆ ಕಾಣುವರು
ಕಲ್ಲೆದಯ, ಕೂರಂಬು, ದೈತ್ಯತನವ
ಹುಲಿ ತೋಳ ಕಾರ್ಕೋಟಕಾದಿ ವನ ಜಂತುಗಳ
ಛಟ್ಟೆಯಿಳಿಸಿದ ಘೋರ ಪಾತ್ರೆಯನ್ನು

ಎಂತು co-exist ಎಂದು ಜಪಿಸುತಿರು ನೀನು
ಎಂತು ಮೇಗಡೆ ಮೃದುವ ಮೆರೆಸು ನೀನು
ಎಂತು ತುಂಬಿದ ಮೊಗದಿ ನಸುನಗೆಯ ಬೀರುತಿರು
ಘಾಟಿತನ, ತೋಳತನ ಇಣಿಕಿ ತೋರುವುವು.

ಇನ್ನೊಮ್ಮೆ ಕಂಡಾಗ ಮೆರೆಯುವುದು ಸೌಜನ್ಯ
ಬಿದ್ದವರನೆತ್ತುವಾ ಜೀವ ಕಾರುಣ್ಯ
ರಾಷ್ಟ್ರ ರಾಷ್ಟ್ರದ ಜನರ ಬನ್ನಿರೆಂದಪ್ಪುವಾ
ನಗುಮೊಗದ ತೆರೆಗೈಯ ತುಂಬು ಔದಾರ್ಯ

ಯಾರರಿವರೈ ನಿನ್ನ ನಿಜವನ್ನು ಆಳವನು
ನಿನ್ನ ಹೃದಯದೊಳಿರುವ ಸಹಜ ಗುಣವನ್ನು
ಒಮ್ಮೆ ಶಾಂತಿಯ ಮಂತ್ರ ಒಮ್ಮೆ ನರಿ ತಂತ್ರ
ಮಾನವತೆಯೊಮ್ಮೆ, ದಾನವತೆಮತ್ತೊಮ್ಮೆ

ನೆಹರು ನಸ್ಸೇರರೋ ಲೆನಿನ ಸ್ಟ್ಯಾಲಿನ್ನರೋ
ಐಕರೋ ಟುಂಗರೋ ಟೀಟೋ ಗೀಟೋಗಳೊ
ವಣ್ಣು ತಟ್ಟಿದ ಹಳಯ ಬೆರಿಯಾದಿ ಗೆಳೆಯರೋ
ಕಣ್ ಬಿಡುವ ಬಲ್ಗೆನಿನ್....ಬಲ್ಲರಾರು ?

— ರಾಮಿ

# ನೊರೆಹಾಲು-ಗಣರಾಜ್ಯ

"ಯಾಕಳುವೆ ಎಲೆ ರಂಗ ! ಬೇಕಾದ್ದು ನಿನಗೀದೆ
ನಾಕೆಮ್ಮೆ ಕರೆದ ನೊರೆಹಾಲು !
ನೊರೆ ಹಾಲು ಸಕ್ಕರೆ ನೀಕೇಳಿದಾಗ ಕೊಡುವೇನು !

ಹಲುಲುಳುಲಾಯಿ ಎಂದು ಅಜ್ಜಿ ಹಾಡುತ್ತಿದ್ದದು ಜ್ಞಾಪಕಕ್ಕೆ ಬಂತು; ಗಣರಾಜ್ಯದ ಹುಟ್ಟಹಬ್ಬದ ಆಚರಣೆಯನ್ನು ನಾನು ಈ ವರ್ಷ ಮಾಡಿದಾಗ.

ಯಾಕೆ ಅಂತೀರಿ ?

ನಮ್ಮ ನಾಪಿತರ ಸಂಘದಲ್ಲಿ ಗಣರಾಜ್ಯದುತ್ಸವ ಬೆಳಿಗ್ಗೆ ಏಳುವರೆ ಗಂಟೆಗೆ ಏರ್ಪಾಡಾಗಿತ್ತು. ನಾನೇ ಕಾರ್ಯದರ್ಶಿ. ಏಳೂಕಾಲುಗಂಟೆಗೆ ಹಾಜರಾಗಿದ್ದ ಸಕಲ ಸದಸ್ಯರೂ ಬಂದರು, ಏಳು ಇಪ್ಪತ್ತೈದರ ಹೊತ್ತಿಗೆ. ಏಳುವರೆ ಬಾರಿಸಿತು. ಮುಖ್ಯ ಅತಿಥಿ ಇನ್ನೂ ಬಂದಿರಲಿಲ್ಲ. ಅವರ ಮನೆಗೆ ನಮ್ಮ ಹುಡುಗನ್ನ ಓಡಿಸಿದೆ ಅವನು ಬೇಗ ಬಂದು "ಅವರು ಮನೆಬಿಟ್ಟು ಹೊರಟು ಅರ್ಧ ಗಂಟೆಯಾಯಿತು ಎಂದು ಹೇಳಿದ. ನಾನು ಕೈ ಕೈ ಹಿಸುಕುದೆ. ಉಳಿದ ನಾಪಿತ ಸದಸ್ಯರೆಲ್ಲಾ ಬಿಸಿ ಬಿಸಿ ಮಾತುಗಳನ್ನೇ ನನ್ನ ಮೇಲೆ ಎಸೆದು ಮುಸೆಯುಲಾರಂಭಿಸಿದರು.

"ಅವನ್ನ್ಯಾಕ್ರೆಲ್ಲಾ ಕರೆದರಿ ? ಬೆಳಿಗ್ಗೆ ಇಷ್ಟು ಬೇಗ ಅವಯ್ಯ ಏಳೋದಾದರೂ ಸಾಧ್ಯವಾ ? ಅಸೆಂಬ್ಲಿ ಮೆಂಬರಾದಾಕ್ಷಣ ನಿನ್ನ ಮಗನಿಗೆ ಕಾಲೇಜಲ್ಲಿ ಸೀಟು ಕೊಡಿಸುಕ್ಯಾಗುತ್ತಾ ? ಅವನಿಗೆ ನೀನು ಬೆಣ್ಣೆ ಹಚ್ಚಾಕ್ಕೇ ಅಂತ ನಮ್ಮನ್ನೆಲ್ಲಾ ಕುರಿ ಮಂದೆ ಕೂಡಿಸಿದ್ಯಾ," ಅಂತ ಒಬ್ಬಾತ ನನ್ನ ಮನಸ್ಸಿನಲ್ಲಿದ್ದ ಆಕಾಂಕ್ಷೆಯನ್ನು ಹೊರಗೆಡವಿದ.

"ಪಂಡಿತ ನೆಹ್ರೂಜೀ ಫೋಟೋಕೆ ಸಣ್ಣ ಹಾರ ಹಾಕಿ, ಮುಖ್ಯ ಅತಿಥೀಗೆ ಅಂತ ದೊಡ್ಡ ಹಾರ ತಂದಿಟ್ಟದ್ದೀಯಲ್ಲಾ ! ಮಂಕರು ನಾವೆಲ್ಲಾ ನೋಡುಲ್ಲಾ ಅಂತ ತಿಳಕೊಂಡೆಯಾ" ಅಂತ ಇನ್ನೊಬ್ಬ ನಾಪಿತ, ಒಳ ಕೊಠಡಿಗೆ ಹೋಗಿ ಬಂದು ಹೇಳಿದ; ಉಗುರು ಕಣ್ಣನ್ನೇ ಕಿತ್ತಂತೆ ನನ್ನ ನೋಯಿಸಿದ.

"ಅವನ ಮಾವ ಮೈಸೂರಾಗೆ ಅಧ್ಯಕ್ಷರ ಹಜಾಮತಿ ಮಾಡ್ತಾನೆ ಅಂತ ಅಳಿಯನಿಗೆ ನಮ್ಮೂರಾಗೆ ಇಲೆಕ್ಷನ್ಗೆ ನಿಲ್ಲಿಸಿ ಗೆಲ್ಲಿಸಿದರು. ಮುಖಕ್ಕೆ ಸರಿಯಾಗಿ ಸೋಪು ಹಚ್ಚಾಕ್ಕೆ ಬರುಲ್ಲ ಅವನಿಗೆ, ನಮಗೆ ಎನು ಬುದ್ಧಿವಾದ ಹೇಳ್ತಾನು ? ಅವನ ಭಾಷಣ ಕೇಳಿ ನಾವೇನು ದೇಶಪ್ರೇಮಿಗಳಾಗೋದು" ಅಂದ ಇನ್ನೊಬ್ಬ ಸದಸ್ಯ.

"ನಾಳೆ ಮಂಗಳವಾರ ಅಂಗಡಿ ಮುಚ್ಚಬೇಕು. ಇವತ್ತು ಆಗಲೇ ಏಳೂ ಮುಕ್ಕಾಲಾಯ್ತು. ಇಲ್ಲೇ ಕೂತರೆ, ಒಂಭತ್ತಕ್ಕೆ ಅಂಗಡಿ ತೆಗೆದರೆ ಮೂರು ಕಾಸೂ ಹುಟ್ಟಲ್ಲ. ಯಾವೊಬ್ಬನೂ ಅಂಗಡಿಗೆ ತಲೆ ಹಾಕುವುದಿಲ್ಲ— ಯಾವೊಬ್ಬಳೂ ತಲೆ ಇಡುವುದಿಲ್ಲ—ಇವತ್ತೂ ಸಂಪಾದನೆಗೆ ಸೊನ್ನೆ ನಾಳೇನೂ ಖಾಲಿ. ಎಂಟ್ಕೆ ಗಂಟೆಗೆ ಸಭೆ ಮುಕ್ತಾಯ ಅಂತ ಸುಳ್ಳು ಯಾಕ್ಲ ಅಂದೆ" ಎಂದೊಬ್ಬ ನನ್ನ ಹತ್ತಿರ ಬಂದು ನಿಂತು ಮುಖಕ್ಕೆ ಮಂಜುನೀರೆರೆಚಿದಂತೆ, ತನ್ನ ಉಗುಳು ನೀರು ಎರಚಿಬಿಟ್ಟ.

ಗಂಟೆ ಎಂಟೂವರೆ ಆಯಿತು "ಎಲ್ಲಾ ಸದಸ್ಯರೂ ಹೊರಟು ಹೋಗುತ್ತೇವೆ ನೀನೇ ನಿನ್ನ ಮುಖ್ಯ ಅತಿಥಿ ಜತೆಗೆ ಸಭೆ ಮಾಡಿಕೊಂಡು ಮೆರೆದುಕೊ ಬೆಂದ ದೇಶದಲ್ಲಿ ಸಿಕ್ಕಿದ್ದನ್ನು ನೀನೇ ಹಿರಿದುಕೋ" ಎಂದು ರೇಗುತ್ತಾ ಎದ್ದರು.

ಆ ವೇಳೆಗೆ ಮುಖ್ಯ ಅತಿಥಿಗಳು ಕಾರಿನಲ್ಲಿ ಬಂದಿಳಿದರು !

"ಎಲಾ ! ಇವನ ! ಇವನಿಗೆಲ್ಲಿ ಸಿಕ್ಕಿತೋ ಕಾರು"

"ಇಲ್ಲಾ ಕಣ್ಲಾ ! ಅವನ ಮಾವ ಊರಿಗೆ ಬಂದಿದ್ದಾನೆ, ಅವನದು ಕಾರು."

"ಹಂಗಲ್ಲಪ್ಪಾ ಇವನೇ ಕೊಂಡಿರಬೇಕು ಯಾರಿಗೋ ಟೋಪಿಹಾಕಿ"

"ಛೇ ! ಛೇ ! ಕಾರು ನೋಡಿದರೆ ಇವನಿಗೇ ಯಾರೋ ಟೋಪಿ ಹಾಕಿದ್ದಾರೆ !"

"ಅರರೆ ! ಪಂಜಾಬೀ ತರಹ ದೊಳ್ಳೆತೊಡೆ, ಅಂಟೆದ ಕಾಲು ಇರುವ ಛಳ್ಳ ಹಾಕಿದ್ದಾನೆ, ಇದನ್ಯಾವಾಗ್ಲೋ ಹೊಲಿಸಿದ್ದು"

"ಉದ್ದಾನೆ ಕರಿ ಅಂಗಿ ನೋಡ್ಲಾ ! ಒಳಗೆ ಬನೀನು ಇಲ್ಲಾ ಅಂತ ಅನ್ನಿಸ್ತದೆ"

"ಆದರೆ ತಲೆ ನೋಡ್ಲಾ ! ತಿರುಗ್ತಾನೇ ಇದೆ ಬುಗುರಿ ಹಂಗೆ"

ಎಲ್ಲರಿಗೂ ಕೇಳಿಸುವ ಈ ಪಿಸುಮಾತುಗಳ ಸಂತೆಯ ಮಧ್ಯೆ ಗೂಳಿ ನುಗ್ಗಿದ ಹಾಗೆ ನುಗ್ಗಿ ಬಂದರು ಮುಖ್ಯ ಅತಿಥಿಗಳು.

ದೊಡ್ಡದಾಗಿ ಎರಡೂ ಕೈಯೆತ್ತಿ ನಮಸ್ತೆ ಮಾಡಿದರು. ಭಾಷಣ ಮಾಡಲು ಶುರು ಹಚ್ಚಿದರು.

"ಗಣರಾಜ್ಯ ನಾನು–ನೀವೂ ಸ್ಥಾಪಿಸಿ ಇವತ್ತಿಗೆ ಒಂಭತ್ತು ವರ್ಷಗಳಾತು. ಮೊದಲ ಪಂಚೀರು ವಾರ್ಷಿಕ ಯೋಚನೆ ಮುಗಿದು, ಎರಡನೇ ಪಂಚೀರಲ್ಲಿ ಅರ್ಧ ಮುಗಿದಿದೆ. ಮೂರನೇ ದಕ್ಕ ಹೊಂಚು ಹಾಕುತ್ತಿರಬೇಕು. ರಾಜ್ಯ ಕಟ್ಟಬೇಕು; ಸಂಪತ್ತು ಬೆಳೆಸಬೇಕು—ಅಹಿಂಸೆ ಮಾಡಬೇಕು; ಜುಲುಮಿನಿಂದ ಆಗಲಿ ಅಹಿಂಸೆ ಮಾಡಲೇಬೇಕು—ಪ್ರೇಮ ಹರಿಸಬೇಕು, ಒದ್ದೋ ಗುದ್ದೋ ಅದನ್ನು ಚೆಲ್ಲಬೇಕು—ನಾವೇ ನೂಲಬೇಕು; ಅದನ್ನ ನೀವೇ ನೇಯಬೇಕು—ಮನೆಗಳನ್ನ ಕಟ್ಟಬೇಕು; ಮಕ್ಕಳ ನಂಬರನ್ನು ಕಡಿಮೆ ಮಾಡಲೇಬೇಕು—ಹೊಟ್ಟೆಗೆ ಒದ್ದೆ ಬಟ್ಟೆಹಾಕ ಬೇಕು, ಜುಟ್ಟಿಗೆ ಮಲ್ಲಿಗೆ ಸಿಕ್ಕಿಸಲೇಬೇಕು.—ಮಡಿಯಲೂಬೇಕು; ಮಾಡಲೂ ಬೇಕು.

ಇತ್ಯಾದಿ ಇತ್ಯಾದಿ ಕುಟ್ಟಿ ಬಜಾಯಿಸಿ. ಬೆವರಿಳಿದರು ಮುಖ್ಯ ಅತಿಥಿಗಳು, ಒಂದು ಗಂಟೆಕಾಲ; ಎದುರಿಗೆ ಮೊದಲಸಾಲಿನಲ್ಲಿ ಕುಳಿತಿದ್ದ ನನ್ನನ್ನೇ ದುರು ದುರುಗುಟ್ಟಿ ನೋಡುತ್ತಾ. ನಂತರ ಕುಳಿತುಕೊಂಡರು.

ಅವರು ಕುಳಿತ ರಭಸಕ್ಕೆ ಕುರ್ಚಿ ಕುರ್ರ್ಯೊ ಮರ್ರೋ ಎಂದು ಕೀಕಲನಿಷಾಧ ದಲ್ಲಿ ಕುಂಯ್‌ಗುಟ್ಟಿತು.

ಎಚ್ಚೆತ್ತೆ. ವೇದಿಕೆಯತ್ತ ಓಡಿದೆ. ಒಳಕೊಠಡಿಗೆ ನುಗ್ಗಿ ಹಾರ ತುರಾಯಿ ತಂದು, ಅವರಿಗೆ ಹಾಕಿದೆ, ಕೈಗಿತ್ತೆ.

ವಂದನೆ ಅರ್ಪಿಸಲು ಯಥಾಪ್ರಕಾರ, ತಥಾ ಗತವಾದಂತೆ, ಗಂಟಲು ಸರಿಪಡಿಸಿ ಕೊಳ್ಳಲು ಸ್ವಲ್ಪ ಕೆನೆದು, ಶುರು ಹಚ್ಚಲು ಆರಂಭಿಸಿದಾಗ ಕಣ್ಣು ಬಿಟ್ಟು ನೋಡಿದೆ.

ಸಭಾ ಮಂದಿರದ ಹಾಲು ಖಾಲಿ.

ಸದಸ್ಯರೆಲ್ಲಾ ತಂತಮ್ಮ ವಸನಾಲಯಗಳಿಗೆ ಹೋಗಿಬಿಟ್ಟಿದ್ದರು. ಮುಖ್ಯ ಅತಿಥಿಗಳು ಕಾರ್ಯದರ್ಶಿಯಾದ ನನ್ನನ್ನೇ ನೋಡುತ್ತಾ ಭಾಷಣ ಮಾಡಿದ್ದರು. ಮುಖ್ಯ ಅತಿಥಿಗಳು ಭಾಷಣ ಬಿಗಿಯುವಾಗ ಕಾರ್ಯ—ವಾಸಿಗಳಾದ ನನ್ನನ್ನೇ ನೋಡುತ್ತಾ ಕಾಲನ್ನೇ ಹಿಡಿದರೆನ್ನಿಸಿತು. ಸಖ್ಯರಿವರೇ ಎಂದು ನನಗರಿವು ತೋರಿತು ಮಗನ ನೆನಪಾದಾಗ. ಮುಖ್ಯ! ವಂದನಾರ್ಪಣೆ ಮಾಡಿ, ತೋಟಿ ತಳವಾರ, ಕೋಲುಗಾರ ಕೋಟ್ಯಾಧೀಶ, ಎಲ್ಲರಿಗೂ ವಂದನೆ ಅರ್ಪಿಸಿ ಹೂಮಾಲೆ ಹಾಕಿದೆ ಮುಖ್ಯ ಅತಿಥಿಗಳಿಗೆ.

ಆತ ನನ್ನನ್ನೂ ತಬ್ಬಿಕೊಂಡ. ಪೇಪರಿನಲ್ಲಿ ಹಾಕಿಸಪ್ಪ ಅಂದರು. ಕಾರಿನಲ್ಲಿ ಕೂತಾಗ ಅವನ ಕಣ್ಣಲ್ಲಿ ಹನಿಗೂಡಿತ್ತು. ಗಂಟಲು ಬತ್ತಿತ್ತೋ ಏನೋ! ಏನೂ ಅನ್ನಲಿಲ್ಲ. ಹೊರಟೇ ಹೋದ ...ಕಾರು ಹೋದಾಗ, ಬಿರಿಸಿನಿಂದ ಬಂದ ಹೊಗೆಯು ನನ್ನ ಮೂಗನ್ನು ರಷ್ಯನ್ ಸ್ಯಾಟಲೈಟಿನ ತರಹ ಕುಕ್ಕಿತು.

ಬೆಳಿಗ್ಗೆ ಹತ್ತೂ ಮುಕ್ಕಾಲಿಗೆ ಮನೆಗೆ ಬಂದೆ. ಬಾಗಿಲಿಗೆ ಬೀಗ ಹಾಕಿತ್ತು. ಪಕ್ಕದ ಮನೆಯ ಮೂರು ವರ್ಷದ ಪದ್ದು ಬಂದು ಹೇಳಿದಳು; "ಅತ್ತೆ ಗಣರಾಜ್ಯದ ಉತ್ಸವಕ್ಕೆ ಅಮ್ಮನ ಮನೆಗೆ ಹೋಗಿದ್ದಾಳೆ. ಮಧ್ಯಾಹ್ನ ಮೂರಕ್ಕೆ ಹಿಂತಿರುಗಿ ಬರುತ್ತಾಳಂತೆ. ನೀವು ಸುಮಾರು ಆರು ಗಂಟೆಗೆ ಬರುತ್ತೀರಿ ಆತನ ಭಾಷಣ ನಿಮ್ಮ ಸಭೆ ಮುಗಿಯುವ ಹೊತ್ತಿಗೆ ಅಷ್ಟು ಹೊತ್ತಾದರೂ ಆಗಿಯೇ ಆಗುತ್ತೆ. ಮಸಲಾ ಬೇಗ ಬಂದರೆ ಹೇಳಮ್ಮಾ ಅಲ್ಲಿಗೇ ಬರಲಿ" ಎಂದು.

ಪದ್ದುವಿನ ಮುಖವನ್ನು ತೀಕ್ಷ್ಣವಾಗಿ ನೋಡಿ ಮುತ್ತಿಟ್ಟೆ. ಮಾತನಾಡದೆ ಅಲ್ಲಿಗೆ ಹೋಗುತ್ತೇನೆ ಎಂದು ಹೇಳಿ ಮನೆ ಬಿಟ್ಟು ಹಾದಿ ಹಿಡಿದು ಊರಾಚೆ ಹೋದೆ, ಹನ್ನೊಂದಕ್ಕೆ.

ಮಾರಿ ಗುಡಿಯ ಹತ್ತಿರ, ಅರಳಿ ಮರದಡಿಯಲ್ಲಿ ಹನ್ನೊಂದೂಕಾಲಿಗೆ ಕುಳಿತೆ. ಎಡಗಡೆ ಕಣ್ಣು ಹಾಯಿಸಿದೆ. ನಾಗರ ಪ್ರತಿಮೆ. ಬಲಗಡೆ ಕಣ್ಣು ಹಾಯಿಸಿದೆ ನಾಗರ ಪ್ರತಿಮೆ. ಹಿಂದೆ ನೋಡಿದೆ ಊರು. ಮುಂದೆ ನೋಡಿದೆ ಕಾಡು. ಕೂತ ಕಡೆ ಕೊರೆಯುತ್ತಿತ್ತು. ತಲೆಯೆತ್ತಿದೆ ಶಾಶ್ವತದ ಅಶ್ವತ್ಥದ ತಂಪು ತಲೆಯ ಕಾಯು ತ್ತಿತ್ತು. ಬರಿ ಹೊಟ್ಟೆಯನ್ನು ತಂಪಾದ ಚಪ್ಪಡಿಯ ಮೇಲೇರಿಸಿ ಬೋಗ್ಗುಬೋರ ಲಾಗಿ ಮಲಗಿದೆ. ಹಿತವಾದ ನಿದ್ರೆ ಬಂತು.

ಕನಸಿನಲ್ಲಿ ತಾಯಿ ಬಂದಳು. ಅವಳ ತಾಯಿ ಬಂದು ದರ್ಶನವಿತ್ತಳು. ಅಜ್ಜಿ ಹಾಡಿದ ಹಾಡು ನೆನಪಿಗೆ ಬಂತು. ಎಲ್ಲರ ಅಜ್ಜಿಯರೂ ಅದೇ ಹಾಡೇ ಹೇಳಿದ್ದು. ಹಾಲು ಹೊಟ್ಟೆಗೆ ಹೋಯ್ತು. ನೊರೆ ತಲೆಗೆ ಏರಿತು.

ಹೊಟ್ಟೆಗೆ ಹಾಲು ಬಿದ್ದವರು ಅಶ್ವತ್ಥದ ನೆರಳಲ್ಲಿ ಮೂಕರಾಗಿ ಮಲಗಿದವರು ನೊರೆ ಏರಿದವರು ಭಾಷಣ ಬಿಗಿದು, ಮೋಟಾರಲಿ ಕುಳಿತು, ಅಮ್ಮನ ಮನೆಗೆ ಹೋಗಿ ಮೆರೆಯುವರು.

* * *

ಕೋಲೇ ಬಸವ ಒಮ್ಮೆ ನುಡಿದ—ಮೆರೆಯುವ ನೊರೆಗೆ ಅಳಿವುಂಟು— ಶಾಶ್ವತದ ಅಶ್ವತ್ಥಕ್ಕಿಲ್ಲ—ಎಂದು.

—ಸಾಪಿ

# ಠಾಣೆಗೆ ಬಾಡಿಗೆ

---

ನಾನು ರಾಜ ಚಂದಿ ಮಾದೇನಳ್ಳಿ ಬಿಟ್ಟು ತಲಕಾಡು ಹಾದಿ ಹಿಡಿದೆವು. ಮಾದೇನಳ್ಳಿ ಡಾಕ್ಟರ ಮನೆಯಲ್ಲಿ ಪುಷ್ಕಳವಾಗಿ ಉಪ್ಪಿಟ್ಟು ಕಾಫಿ ಹೊಡೆದಿದ್ದೆವು. ಹಾಗಾಗಿ ಎಳೆ ಬಿಸಿಲಿನಲ್ಲಿ ಸುಸ್ತಿಲ್ಲದೆ ಸುಮಾರು ಹತ್ತು ಮೈಲಿಗಳಷ್ಟು ತುಳಿದೆವು. ಒಬ್ಬರೂ ಹೆಚ್ಚು ಮಾತಾಡಲಿಲ್ಲ ಒಂದು ಬಾರಿ ಮಾತ್ರ ರಾಜ, ರಸ್ತೆಯ ಎರಡೂ ಪಕ್ಕಗಳಲ್ಲಿ ವಿಶಾಲವಾಗಿ ಹರಡಿದ ಹಸುರು ಗದ್ದೆಗಳನ್ನು ವರ್ಣಿಸುತ್ತ, ರಸ್ತೆ ಅಂಚಿನಲ್ಲಿದ್ದ ಆಲದ ಮರದ ಮೇಲೆ ತನ್ನ ಸೈಕಲ್ ಹತ್ತಿಸಲು ಯತ್ನಿಸಿದ್ದ. ನಾನು ಚಂದಿ ಇಬ್ಬರೂ ಸೇರಿ ರಾಜನ್ನ ಮರದಿಂದ ಬಿಡಿಸಿದೆವು. ಆ ಮೇಲೆ ನಮ್ಮ ಪ್ರಯಾಣ ಸುಸೂತ್ರವಾಗಿ ಮುಂದುವರಿಯಿತು. ಮಧ್ಯಾಹ್ನ ಒಂದು ಘಂಟೆಗೆ ಜಂಗಲೂರು ಸೇರಿದೆವು. ಜಂಗಲೂರು ಹೋಟೆಲು ಭಟ್ಟರು ಕೊಟ್ಟ ತಟ್ಟೆ ಊಟದಲ್ಲಿ ಹೊಟ್ಟೆ ತುಂಬಿಕೊಂಡೆವು. ನಮ್ಮ ಕಾರ್ಯಕ್ರಮದ ಪ್ರಕಾರ—ಊಟ ವಾದ ಮೇಲೆ ಒಂದರ್ಧ ಘಂಟೆ ಕಾಲ ಮಾತ್ರ ವಿಶ್ರಾಂತಿ ತೆಗೆದುಕೊಂಡು ನಮ್ಮ ಯಾತ್ರೆಯನ್ನು ಮುಂದುವರಿಸಬೇಕೆಂದು. ಆದಷ್ಟು ಜಾಗ್ರತೆಯಾಗಿ ಈ ನಮ್ಮ ಬೆನ್ನು ಹತ್ತಿರುವ ತಲಕಾಡು ಯಾತ್ರೆಯನ್ನು ಮುಗಿಸಬೇಕೆಂದು.

ಆದರೆ—

ಅವತ್ತು ಜಂಗಲೂರಲ್ಲಿ ರಾತ್ರಿಯೆಲ್ಲಾ ಕಳೆಯಬೇಕಾಯ್ತು—ಅದೂ ಪೋಲೀಸು ಠಾಣೆಯಲ್ಲಿ! ರಾಜ ಹೇಳುವ ಹಾಗೆ—ನಮ್ಮ ಕೈಲೇನಿದೆ?

ನಿಜವಾಗಿ ನೋಡಿದರೆ ಅದು ನಮ್ಮ ತಪ್ಪೇನಲ್ಲ. ಜಂಗಲೂರು ಪೋಲೀಸ್ ಕಾನ್‌ಸ್ಟೇಬಲ್ ತಪ್ಪೂ ಅಲ್ಲ. ಎಷ್ಟೋ ವೇಳೆ ಯಾರ ತಪ್ಪೂ ಇಲ್ಲದೆ "ಹಿಮಾಲಯನ್ ಬ್ಲಂಡರ್" ಆದ ಹಾಗೆ, ನಡೆದು ಹೋಯ್ತು. ನಡೆದ ಕೆಲವು ಪ್ರಸಂಗ ಗಳಿಂದ ಆ ಕಾನ್‌ಸ್ಟೇಬಲ್ಲಿಗೆ ನಮ್ಮ ಮೇಲೆ ಗುಮಾನಿ ಬಂದಿದ್ದು ನ್ಯಾಯವೇ. ರಾಜನ ವರ್ತನೆಯಿಂದ ನಾವು ಯಾರೋ ಭಾತ್ಮೀದಾರರೆಂದು ಅನುಮಾನ ಬಂದಿದ್ದೂ ನ್ಯಾಯವೇ. ರಾಜನ ನೆರವಿಗಾಗಿ ಚಂದಿ ಕೆರಳಿದ್ದೂ ಸರಿಯೇ— ನನಗೇನೂ ಕಿಂಚಿತ್ತಾದರೂ ಬೇ....ತಾಳಿ!

ಈ ವರದಿಯನ್ನು ನಾನು ಹಿಂದು ಮುಂದಾಗಿ ಬರೆಯುಕ್ಕೆ ಶುರುಮಾಡಿದ್ದೇನೆ! ಈ ಬೇನೆ ನನಗೆ ಚಂದಿಯ ಸಹವಾಸದಿಂದ ಬಂದಿದ್ದು—ನಡೆದ ಸಂಗತಿ ಹೀಗೆ—

ನಾವು ಯಾವ ಊರಿಗೆ ಹೋದರೂ—ರಾಜ—ನಡೆದದ್ದನ್ನು, ಕೇಳಿದ್ದನ್ನು, ನೋಡಿದ್ದನ್ನು—ಒಂದು ಕಿಸೆ ಪುಸ್ತಕದಲ್ಲಿ ಬರೆದುಕೊಳ್ಳುವ ವಾಡಿಕೆ. ನಾವು ಜಂಗಲೂರು ಹೋಟಲಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ರಾಜ, ತನ್ನ ಪುಸ್ತಕದಲ್ಲಿ ಜಂಗಲೂರು ಸ್ಥಳಪುರಾಣದ ಕೆಲವು ಅಂಶಗಳನ್ನು ಬರೆದುಕೊಳ್ಳುತ್ತಿದ್ದ. ಹೋಟೆಲು ಭಟ್ಟರ ತಮ್ಮನೇ ಈ ಪುರಾಣ ಹೇಳುತ್ತಿದ್ದ. ಚಂದಿ ಆ ಪುರಾಣವನ್ನು ಅನುವಾದ ಮಾಡುತ್ತಿದ್ದ. ನಾನು—ಅಲ್ಲಿ ಇಲ್ಲಿ ಬರುತ್ತಿದ್ದ ತಪ್ಪನ್ನು ತಿದ್ದುತ್ತಿದ್ದೆ. ಇದ್ದಕ್ಕಿದ್ದ ಹಾಗೆ—ಹೋಟಲಿನ ಹಾಲಿನ ಮೂಲೆಯಲ್ಲಿ ಕೂತಿದ್ದ ಒಬ್ಬ ವ್ಯಕ್ತಿ ಬಂದು—ರಾಜನ ಕೈಯಿಂದ ಆ ಪುಸ್ತಕವನ್ನು ಹಾರಿಸಿದ. ಈ ವರ್ತನೆಯಿಂದ ವ್ಯಕ್ತಿ ಸ್ವಾತಂತ್ರ್ಯ—ಪ್ರತಿಯೊಬ್ಬ ಭಾರತೀಯನ ಹಕ್ಕು—ಕ್ಕೆ ಧಕ್ಕೆ ಬಂದಂತಾಗಿ ರಾಜ ಪುನಃ ಆತನ ಕೈಯಿಂದ ತನ್ನ ಪುಸ್ತಕವನ್ನು ವಶಪಡಿಸಿಕೊಂಡ—ಅಷ್ಟರಲ್ಲಿ ಆತನೇ ಆ ಪುಸ್ತಕವನ್ನು ಒಂದು ಬಾರಿ ನೋಡಿ ತಾನೇ—ರಾಜನ ಕೈಲಿ ಇಡುವುದ ರಲ್ಲಿದ್ದರೂ ಇರಬಹುದು. ಏನೇ ಆಗಲಿ....ಇಷ್ಟಕ್ಕೆ ಈ ಪ್ರಸಂಗ ಮುಗಿದಿರಬಹು ದಿತ್ತು—ಚಂದಿ ಸುಮ್ಮನಿದ್ದಿದ್ದರೆ....

ಚಂದಿ ಸುಮ್ಮನಿರಲಿಲ್ಲ.

ಹಿಂದೆ—ವಿಜಯನಗರದ ಯುದ್ಧಗಳಲ್ಲಿ, ಸಿಪಾಯಿ ದಂಗೆಯಲ್ಲಿ, ಮೈಸೂರ್ರು ಮೂರು—ನಾಲ್ಕನೇ ಯುದ್ಧಗಳಲ್ಲಿ, ಸುರಪುರದ ಲಡಾಯಿಗಳಲ್ಲಿ ಕುಂಬಾರಪೇಟೆ ಕಾಮಣ್ಣನ ಕಾಳಗದ ಹೋರಾಟದಲ್ಲಿ ಭಾಗವಹಿಸಿದ್ದ ತನ್ನ ಮುತ್ತಜ್ಜ, ಅಜ್ಜಂದಿರ —ಬಿಸಿ ರಕ್ತ ಅವನಲ್ಲಿ ಪುನಃ ಉಕ್ಕೆದ್ದು—ಚಂದಿ ಆ ವ್ಯಕ್ತಿಯ ಅಂಗಿಯನ್ನು ಹಿಡಿದ—

ಆ ಸಮಯದಲ್ಲಿ ನಾನು ಇದ್ದಿದ್ದರೆ ಮತ್ತೇನು ಅನಾಹುತವಾಗುತ್ತಿತ್ತೋ ಗೊತ್ತಿಲ್ಲ. ನನಗೆ ತುಸು ಅಸ್ತಮಾ ಶುರುವಾದದ್ದರಿಂದ ಘಾಳಿಗಾಗಿ ಹೊರಗೆ ಬಂದೆ.

ಸುಮಾರು ಅರ್ಧ ಘಂಟೆ ಕಾಲ—ಜಂಗಲೂರು ಭಟ್ಟರ ಹೋಟೆಲು—ಕುರುಕ್ಷೇತ್ರವಾಗಿತ್ತು. ಕಡೆಗೆ—ಬಿದ್ದಿದ್ದ ಕುರ್ಚಿ ಮೇಜಗಳನ್ನು ಸರಿಯಾಗಿಟ್ಟು, ಒಡೆದಿದ್ದ ಗಳಾಸುಗಳನ್ನು ಗುಡಿಸಿ, ಬಿದ್ದ ಗೋಡೆಗಳನ್ನು ಮತ್ತೆ ನೇರವಾಗಿಟ್ಟ ಮೇಲೆ—ಪುನಃ ಒಳಗೆ ಹೋದೆ. ನನ್ನ ಅಸ್ತಮಾ ಕಮ್ಮಿಯಾಗಿತ್ತು.

"ಶುದ್ಧ ಅಂಜುಬುರುಕ!" ಅಂದ ರಾಜ.

ಅತ್ತಿತ್ತನೋಡಿ—"ಯಾರು?" ಅಂದೆ.

"ನೀನು!—ನಮ್ಮಿಬ್ಬರ ಮೇಲೆ ಊರೆಲ್ಲಾ ಧಾಳಿ ಮಾಡುತ್ತಿದ್ದಾಗ—ನೀನು ಮೆಲ್ಲಗೆ ತಲೆ ತಪ್ಪಿಸಿಕೊಂಡೆಯಲ್ಲಾ—ಒಳ್ಳೇ ಲೀಡರು!—ಉತ್ತರ!"

ಅಂದ ಚಂದಿ.

"ನನಗೆ ಆಸ್ತಮಾ ಶುರುವಾಯ್ತು ಅಷ್ಟೆ—ಹಾಗೂ ನಾನೂ ಇದ್ದಿದ್ದರೆ ಮತ್ತೂ ರಾದ್ಧಾಂತವಾಗುತ್ತಿತ್ತು ಬಿಡು—ನಡೆದಿದ್ದೇನು ?"

"ನಿನ್ನ ಆಸ್ತಮಾಕ್ಕೆ ಇಷ್ಟು ಬೆಂಕಿಹಾಕು!

—ನೀನು ಹೋಗಿದ್ದು........"

"ಏನಾಚ್ತೋ ?"

"ನಾವು ಸುದ್ದಿಗಾರರೆಂದು ಇಲ್ಲಿ ಗುಲ್ಲೆದ್ದಿತು—ಇಲ್ಲಿ ಬೇಡ—ನಡೆ"

ಅನ್ನುತ್ತ ನನ್ನನ್ನು ದಬ್ಬಿಕೊಂಡು ರಾಜ ಚಂದಿ ಇಬ್ಬರೂ ಹೋಟೆಲಿಂದ ಹೊರಬಿದ್ದರು. ತುಸದೂರ ವಾಹನಗಳನ್ನು ತಳ್ಳುತ್ತ ನಡೆದೆವು. ನಡೆದ ಪ್ರಸಂಗವೆಲ್ಲಾ ತಿಳಿಯಿತು—

ಜಂಗಲೂರು ಚಿಕ್ಕದಾದರೂ—ದೊಡ್ಡ ಶಹರುಗಳವ್ಯಾಧಿಗಳೆಲ್ಲಾ ಅಲ್ಲಿವೆ. ಸಾಮಾನ್ಯ ಅರ್ಜಿ ಬರಹಗಾರರಿಂದ ವಿಶೇಷ ಅರ್ಜಿದಾರರೂ ಇದ್ದಾರೆ. ಸಾಮಾನ್ಯ ಸುದ್ದಿಗಾರರ ಜೊತೆಗೆ ವಿಶೇಷ ಸುದ್ದಿಗಾರರೂ ಇದ್ದಾರೆ. ಕಂಡದ್ದನ್ನು ಕಂಡ ಹಾಗೆ ಬರೆಯುವವರೂ ಇದ್ದಾರೆ. ಈ ಬರಹಗಾರರ ಮುಂದೆ—ಬಂಕಿಮ ಚಂದ್ರರು—ಕೂಸು ! ಈ ಬರಹಗಾರರಿಗಾಗಿಯೇ ಮೀಸಲಾಗಿ ಎರಡು ಮೂರು ವಾರ ಪತ್ರಿಕೆಗಳುಕೂಡ ಹೊರಡುತ್ತಿವೆಯಂತೆ. ಹಾಗಾಗಿ ಈ ನಡುವೆ ಜಂಗಲೂರಿನಲ್ಲಿ ಕೆಲಸ ಮಾಡುತ್ತಿರುವ ಪ್ರತಿಯೊಬ್ಬ ನೌಕರನ ಮೇಲೂ-ಈ ಪತ್ರಿಕೆಗಳು ಕಥೆಗಳನ್ನು ಬರೆದಿವೆ. ಜಂಗಲೂರಿನ ಝಾಡಮಾಲಿಯಿಂದ ಹಿಡಿದು—ಪ್ರೈಮರಿ ಸ್ಕೂಲು ಮಾಸ್ತರು, ಮೇಡಮ್, ಮಾಧ್ಯಮಿಕ ಶಾಲಾ ಮಾಸ್ತರುಗಳು, ಪ್ರೌಢಶಾಲಾ ಮಾಸ್ತರುಗಳು, ಮೇಡಮ್‌ಗಳು, ಕ್ಲಾರ್ಕುಗಳು, ಆಸ್ಪತ್ರೆಯ ಡಾಕ್ಟರು, ನರ್ಸುಗಳು, ಆಯಾಗಳು, ಪೋಲೀಸು ಕಾನ್‌ಸ್ಟೇಬಲ್, ದಫೇದಾರರು, ರೇಂಜರು, ತಹಶೀಲದಾರರು ಯಾರೂ ಈ ಕಥೆಗಾರರ ಕಟಾಕ್ಷಕ್ಕೆ ತಪ್ಪಿಸಿಕೊಂಡಿಲ್ಲ. ಬರಹಗಾರರು ತಮ್ಮ ಕಥೆ ಅಚ್ಚಾದುದನ್ನು ಓದಿ ಮೆಚ್ಚಿ ಸಂತೋಷಪಟ್ಟು ಸಂಬಂಧ ಪಟ್ಟ ಕಥಾನಾಯಕ ನಾಯಕಿಯರಿಗೆ ಸಹಾನುಭೂತಿ ಕೊಡುವುದು ಇಲ್ಲಿಯ ವಿಶೇಷ. ಆದರೆ—ಇವರಿಗೆ ಅಂದರೆ—ನೌಕರರಿಗೆ ಸಹಾನುಭೂತಿ ಬೇಕಿಲ್ಲ ಅವರಿಗೆ ಈಗ ಮತ್ತೂ ಆರಾಂ! ಯಾರಿಗೆ ತಲೆಬಾಗಿದರೆ ಯಾರಿಗೆ ರೇಗುತ್ತೋ ಅನ್ನುವ ಅನುಮಾನದಿಂದ ಯಾರಿಗೂ ತಲೆಬಾಗಿಲ್ಲ. ಸರ್ಕಾರವನ್ನೇ ನಿಲ್ಲಿಸಿದ್ದಾರೆ. ಸರ್ಕಾರಕ್ಕೆ ಸಂಬಂಧಪಟ್ಟ ಗಡಿಯಾರಗಳು ಕೂಡ ನಡೆಯುತ್ತಿಲ್ಲ. ಆದರೂ—ಒಂದು ವಿಷಯಕ್ಕಾಗಿ ಕೊರಗುತ್ತಾರಂತೆ—ಸರ್ಕಾರಿ ನೌಕರ—ಇತ್ತ ರಾಜ

ಕಾರಣಿಗಿರುವ ಅಧಿಕಾರವೂ ಇಲ್ಲದೆ—ಅತ್ತ ಸಾಮಾನ್ಯ ಪ್ರಜೆಗಿರುವ ಹಕ್ಕು ಸ್ವಾತಂತ್ರ್ಯವೂ ಇಲ್ಲದೆ ತನ್ನೊಳಗೆ ತಾನೇ "ಜನಗಣಮನ" ಹೇಳಬೇಕಾಗಿದೆ ಆದರೂ—ಪೋಲೀಸು ಕಾನ್‌ಸ್ಟೇಬಲ್ ಮಾತ್ರ ತುಸ ಅಧಿಕಾರ ಚಲಾಯಿಸಬಲ್ಲ. ಆದರಲ್ಲೂ—ಜಂಗಲೂರಿನವರಲ್ಲವೆಂದೂ, ನಿತ್ರಾಣಿಗಳೆಂದೂ ತಿಳಿದರೆ—ಅಧಿಕಾರ ಚಲಾಯಿಸೇ ಚಲಾಯಿಸುತ್ತಾನೆ. ರಾಜನಿಂದ ಪುಸ್ತಕ ಹಾರಿಸಿದವ್ಯಕ್ತಿ ಜಂಗಲೂರು ಪೋಲೀಸು ಕಾನ್‌ಸ್ಟೇಬಲ್—ಮುಫ್ತಿ ಅಂತ ಗೊತ್ತಾಯಿತು. ಜಂಗಲೂರಿನ ಮತ್ತೊಂದು ಕಥೆ ಶೇಖರಣೆಯಾಗುತ್ತಿದೆ ಎಂಬ ಭಯದಿಂದ ಈ ಪುಸ್ತಕ ಹಾರಿಸಿದ್ದ.

ಆದರೆ ಮುಫ್ತಿ ಒಂದು ತಪ್ಪು ಮಾಡಿದ. ನಾವು ಜಂಗಲೂರಿನವರೇನೋ ಅಲ್ಲ—ನಿಜ. ಆದರೆ ಆತ ನಮ್ಮನ್ನು ನಿತ್ರಾಣಿಗಳು ಅಂತ ಭಾವಿಸಿದ್ದು ತಪ್ಪಾಯ್ತು. ನಾನು ಹೊರಗೆ ಬಂದಮೇಲೆ—ಅಸ್ತಮ ಶುರುವಾದದ್ದರಿಂದ—ಒಳಗೆ ವಿಪರೀತ ಮಾರಾಮಾರಿಯಾಯ್ತು. ಮೊದಲು ಚಂದಿಗೂ ಮುಫ್ತಿಗೂ ಗುದ್ದಾಟವಾಯ್ತು. ಅಷ್ಟರಲ್ಲಿ ಅಕ್ಕಪಕ್ಕದಲ್ಲಿದ್ದ ತಿಂಡಿಪೋತರು ಎದ್ದರು—ಈ ಗಲಾಟೆಯಲ್ಲಿ ಕೆಲವರು ತಮ್ಮ ಬಿಲ್ಲನ್ನು ಕಿಸೆಯಲ್ಲಿ ಸೇರಿಸಿ ಹೆಬ್ಬಾಗಿಲ ಕಡೆ ಓಡಿದರು. ಅವರನ್ನು ಭಟ್ಟರ ಅರ್ಥ ಸಚಿವ ಬಂಧಿಸಿದ. ಅಲ್ಲೊಂದು ಮಾರಾಮಾರಿ ಶುರುವಾಯ್ತು. ರಾಜ ಬಂದು ಕುರ್ಚಿಯನ್ನು ಅಣಾಮತ್ತು ಎತ್ತಿ ಚಂದಿಯ ಮೇಲೆ ಹಾಕಿದ. ರಾಜನಿಗೂ ಚಂದಿಗೂ ಗುದ್ದಾಟ ಶುರುವಾಯ್ತು. ಈ ಗಲಾಟೆಯೆಲ್ಲಾ ನೋಡಿ ಮುಫ್ತಿಗೆ ಇನ್ನಷ್ಟು ಹುರುಪು ಬಂತು. ದಫೇದಾರ ಗಿರಿಯ ಕನಸು ಬಿತ್ತು. ಜನರಲ್ ಆಯೂಬ್‌ಖಾನ್—ಪಾಕಿಸ್ತಾನವನ್ನು ಹತೋಟಿಗೆ ತಂದ ರೀತಿಯನ್ನು ಜ್ಞಾಪಿಸಿಕೊಂಡವನಂತೆ—ಅಲ್ಲಿ ನೆರೆದಿದ್ದವರ ಮೇಲೆಲ್ಲಾ ಹಾರಿ—ಅವರನ್ನೆಲ್ಲಾ ಒಂದೇ ಬಾರಿಗೆ ಬಂಧಿಸಲೆತ್ನಿಸಿದ. ಆತನ ದೋರಣೆ ಭಟ್ಟರ ಅರ್ಥ ಸಚಿವನಮುಂದೆ ನಡೆಯಲಿಲ್ಲ. ಹೀಗಾಗಿ—ಆ ಘಳಿಗೆಯಲ್ಲಿ ಜಂಗಲೂರು ಭಟ್ಟರ ಹೋಟೆಲು ಹಾಲಿನಲ್ಲಿ ಸೇರಿದ್ದ ಅಷ್ಟೂ ಜನರ ಮೇಲೆ—ಹನ್ನೊಂದು ಸೆಕ್ಷನ್‌ಗಳ ಪ್ರಕಾರ ಇಪ್ಪತ್ತೊಂಭತ್ತು ಕೇಸುಗಳನ್ನು ಹಾಕಿ ಹೊರಗೆ ಬಿದ್ದ. ರಾಜನನ್ನು ಎರಡು ಕೇಸುಗಳಲ್ಲಿ ಅಪರಾಧಿಯಾಗಿಯೂ, ಆರು ಕೇಸುಗಳಲ್ಲಿ ಸಾಕ್ಷಿಯಾಗಿಯೂ, ಚಂದಿಯನ್ನು ಮೂರು ಕೇಸುಗಳಲ್ಲಿ ಅಪರಾಧಿಯಾಗಿಯೂ, ಒಂದು ಕೇಸಿನಲ್ಲಿ ಸಾಕ್ಷಿಯಾಗಿಯೂ—ವಾರಂಟು ಕೊಟ್ಟು ಮಾರನೆಯ ದಿನ ಪೋಲೀಸುಠಾಣೆಗೆ ಹಾಜರಾಗಲು ಆಜ್ಞೆ ಇತ್ತಿದ್ದ. ಅಸ್ತಮಾ ನನ್ನನ್ನು ಕಾಪಾಡಿತು.

ಅಂದು ರಾತ್ರಿಯೇ—ಆ ಪೋಲೀಸು ಕಾನ್‌ಸ್ಟೇಬಲ್‌ನನ್ನೇ ಸ್ನೇಹಮಾಡಿ ಠಾಣೆಯಲ್ಲೇ ಝಂಡಾ ಹಾಕಿದೆವು ರಾತ್ರಿ ಹತ್ತು ಘಂಟೆಗೆಲ್ಲಾ ನನಗೆ ನಿಧ್ರೆ

ಹತ್ತಿತು. ಮಾರನೆಯದಿನ ಬೆಳಗ್ಗೆ—ಎದ್ದೊಡನೆ ಚಂದಿ ಏಳು ರೂಪಾಯಿ ಇಪ್ಪತ್ತೈದು ನಯಾ ಪೈಸಾ ಕೇಳಿದ. ಕೊಟ್ಟೆ. ಅದನ್ನು ಕಾನ್‌ಸ್ಟೇಬಲ್‌ಗೆ ಕೊಟ್ಟ. ಪ್ರಾಯಶ ಠಾಣೆಯ ಒಂದು ರಾತ್ರಿಯ ಬಾಡಿಗೆ ಅಂದುಕೊಂಡೆ. ನಮ್ಮ ಪಂಚವಾರ್ಷಿಕ ಯೋಜನೆಗೆ ಯಾವ್ಯಾವ ರೀತಿಯಲ್ಲಿ ಹಣ ಶೇಖರಿಸುತ್ತಾರೆಂದು ಹೇಳಲು ಅಸಾಧ್ಯ! ಆದರೆ ಆ ಮೇಲೆ ತಿಳಿಯಿತು.— ರಾಜ ಚಂದಿ—ಆತನ ಹತ್ತಿರ ರಾತ್ರಿಯೆಲ್ಲಾ ಇಸ್ಪೀಟ್ ಆಡಿ ಮಾಡಿದ ಸಾಲ ಅಂತ! ಅಂತೂ ಬಾಡಿಗೆ ಅಲ್ಲ, ಸಧ್ಯ ಲಂಚವೂ ಅಲ್ಲ!

ನಮ್ಮ ಮೇಲೆ ಕೇಸುಗಳ ನಿರ್ಬಂಧ ಮಾಡಲಿಲ್ಲ. ತನ್ನ ಜೊತೆಯಲ್ಲಿ ಇಸ್ಪೀಟ್ ಆಡಿ ಸೋತ ಮಂಕುದಿಣ್ಣೆಗಳು ಏನು ಅಪರಾಧ ಮಾಡ್ಯಾವು—ಅನ್ನುವ ಭಾವನೆಯಿಂದಿರಬೇಕು—ರಾಜ ಚಂದಿಗೆ ಖುಲಾಸೆಯಾಯ್ತು. ಜಂಗಲೂರನ್ನು ಹೊಗಳುತ್ತ ತಲಕಾಡು ಹಾದಿ ಹಿಡಿದೆವು.

—ಕೇಪ

---

**ಹಾದಿಯಲ್ಲಿ ಕೇಳಿಸಿದುದು**

"ಶ್ರೀಮತಿ ಇಂದಿರಾ ಗಾಂಧಿ ಅಧ್ಯಕ್ಷಿಣಿ ಆಗೋಕೆ ನಂದೇನೂ ಅಭ್ಯಂತರ ವಿಲ್ಲಪ್ಪ—ಇದನ್ನು ಪೇಪರಿನಲ್ಲಿ ಓದಿದ ನನ್ನಾಕೆ—ವಜ್ರದ ವಾಲೆ ಬೇಕೂಂತ ಹಠ ಹಿಡಿದಿದ್ದಾಳೆ. ನನ್ನ ಮಗಳಿಗೆ ಮೂರೆಳೆ ಚೈನು ಬೇಕಂತೆ—ಇದಕ್ಕೇನಯ್ಯ ಹೇಳ್ತಿ ?"

*  *  *

**ವೈದ್ಯರಲ್ಲಿ ವಿಷ ನಿಮಿಷಗಳು**

"ನಮ್ಮ ಯಜಮಾನರಿಗೆ—ಟೈಫಾಯ್ಡ್ ಖಾಯಿಲೇನೇ—ನಿಜವಾಗಿ ಹೌದೇ—ಡಾಕ್ಟ್ರೇ?"

"ಸಂಶಯವೇ ಬೇಡಮ್ಮ—ನಾನು ಇದುವರಿವಿಗೂ ಟೈಫಾಯ್ಡ್ ಅಂತ ಹೆಸರಿಟ್ಟ ಕೇಸುಗಳೆಲ್ಲಾ ಟೈಫಾಯ್ಡಿಂದಲೇ ಸತ್ತಿವೆಯೇ ಹೊರತು—ಬೇರೆ ಯಾವ ಖಾಯಿಲೆಯಿಂದಲ್ಲಮ್ಮ!"

# ಟಾ—ಟಾ

ಇದೊಂದು ಹಾಳು ಚಾಳಿ, ಈಚೆಗೆ ಹರಡಿಬಿಟ್ಟಿದೆ, ಎಲ್ಲೆಲ್ಲೂ! ಮಾರ್ಕೆಟ್ಟಿಗೆ ಹೊರಟಾಗಲೂ, ಮನೆಯವರೆಲ್ಲ ಆಬಾಲ ಗೋಪಾಲ ಗೇಟ್ ಬಳಿ ಸಾಲಾಗಿ ನಿಂತು, ಹಲ್ಲು ಕಿರಿಯುತ್ತ, ಹರಕು ಚಿಂದಿ ಬೀಸುತ್ತಾ, ಟಾ–ಟಾ, ಟಾ–ಟಾ, ಅಂತ ಅಸಹ್ಯ ದನಿಗಳಲ್ಲಿ ಕೂಗೋದು! ಹೋಗುವವನು ಪಾಪ, ಹಾಯಾಗಿ, ಗೆದ್ದೆ, ಅಂತ ಎದೆ ಚಾಚಿಕೊಂಡು ನಡೆಯುವ ಹಾಗಿಲ್ಲ, ಮುಂದು ಮುಂದಕ್ಕೆ, ಹೆಜ್ಜೆ ಹೆಜ್ಜೆಗೂ ಹಿಂದು ಹಿಂದಕ್ಕೆ ತಿರುಗುತ್ತಾ, ಅವನೂ ಹಲ್ಲುಕಿರಿಯಬೇಕು. ಟಾ–ಟಾ ಎಂಬ ಅವರ ಕಿರಿಲಾಟವನ್ನು ಅಣಕಿಸಬೇಕೆಂಬ ಆಸೆ ಅವನಲ್ಲಿ ಎಷ್ಟು ಬಲವಾಗಿದ್ದರೂ, ಅವನು ಮಾತ್ರ ಟಾ–ಟಾ ಎಂದು ಹೇಳಕೂಡದಂತೆ. ಅದು ಮರ್ಯಾದೆಯಲ್ಲವಂತೆ.

ಮನೆ ಮುಂದಿನ ನಾಟಕ ಈ ರೀತಿಯದಾದರೆ, ರೈಲು ಸ್ಟೇಷನ್‌ನಲ್ಲಿ ಪ್ರತಿದಿನವೂ ಹತ್ತಾರು ಸಲ ನಡೆಯುವ ಈ 'ಟಾ–ಟಾ ನಾಟಕ' ಪ್ರೇಕ್ಷಕರಿಗೆ ಅತ್ಯಾನಂದಕರವಾಗಿರುತ್ತವೆ. ಅದರ ಸವಿಯನ್ನನುಭವಿಸಬೇಕಾದರೆ, ನಾವು ಟಾ–ಟಾ ಹೇಳುವ ತಂಡಕ್ಕೂ ಸೇರಿರಬಾರದು; ಟಾ–ಟಾ ಹೇಳಿಸಿಕೊಳ್ಳುವ ಆಸಾಮಿಯೂ ಆಗಿರಬಾರದು. ಕೇವಲ ಪ್ರೇಕ್ಷಕನಾಗಿರಬೇಕು, ಅದೇ ಉತ್ತಮ.

ರೈಲ್ವೆ ಇಲಾಖೆಯ ಅಧಿಕಾರಿಗಳು ತಮ್ಮ ವರ್ತನೆಯಿಂದ ಈ ಟಾ–ಟಾ ಪ್ರಕರಣವನ್ನು ಇನ್ನೂ ಸ್ವಾರಸ್ಯತರವಾಗಿ ಮಾಡುತ್ತಿರುವುದು ಸ್ತೋತ್ರಾರ್ಹ. ಅಧಿಕಾರಿಗಳು ಒಂಭತ್ತು ಗಂಟೆಗೆ ಹೊರಡಬೇಕಾದ ರೈಲನ್ನು ಒಂಭತ್ತೂ ಮುಕ್ಕಾಲಿಗೆ ಕದಲಿಸುತ್ತಾರೆ; ಕದಲಿಸಿ, ಮತ್ತೆ ನಿಲ್ಲಿಸುತ್ತಾರೆ; ನಿಲ್ಲಿಸಿ ಕೊಂಚ ಶಿಳ್ಳಿ ಊದಿಸುತ್ತಾರೆ; ಊದಿಸಿ ಮತ್ತೆ ಕದಲಿಸಿ, ಮತ್ತೆ ನಿಲ್ಲಿಸುತ್ತಾರೆ. ಇದರಿಂದಾಗಿ, ರೈಲು ಮುಂದಕ್ಕೆ ಸಾಗಿ ಕಣ್ಮರೆಯಾಗುವವರೆಗೂ ಬೀಸುವ ಸಲುವಾಗಿ ತಂದ ಬಟ್ಟೆಯ ಉಪಯೋಗ, ಅದಕ್ಕೆ ಮೊದಲೇ ಹತ್ತಾರುಸಲ ಜರುಗಿರುತ್ತದೆ. ಕೊನೆಯ ಕೈಕುಲುಕು ಐದಾರು ಸಲ ನೆರವೇರಿರುತ್ತದೆ. ಕಂಬನಿಯಂತೂ ಆಗಾಗ ಬಂದು, ಖರ್ಚಾಗಿ, ಬತ್ತಿಹೋಗುತ್ತದೆ, ಕಟ್ಟಕಡೆ ರೈಲು ಹೊರಟೇಬಿಟ್ಟಾಗ!

ಊರುಬಿಟ್ಟು ಹೊರಡುವಾಗ, ಕಂಬನಿ ಸುರಿಸಿ ಕೈಕುಲುಕಿ, ಬಟ್ಟೆ ಬೀಸಿ, ಟಾ–ಟಾ ಮಂತ್ರ ಜಪಿಸುವಂತೆ, ಊರುಬಿಡುವ ವ್ಯಕ್ತಿಯೇ ಇಸವೊಂದಕ್ಕೆ ತಲಾ

ಒಂದಾಣೆ ಪ್ಲಾಟ್‌ಫಾರಂ ಟಿಕೆಟ್‌ಗಾಗಿ ತೆತ್ತು, ರೆಸ್ಟಾರೆಂಟ್‌ನಲ್ಲಿ ತಲಾ ಹನ್ನೆರಡಾಣೆ ತಿಂಡಿ ತುಂಬಿಸಿ, ತಾನು ಕುಳಿತಿರುವ ಡಬ್ಬಿಯ ಕಿಟಕಿಯಾಚೆ ಗುಂಪುಗೂಡಿಸುವುದು ಒಂದು ದೊಡ್ಡ ಸಾಹಸವೇ ಸರಿ! ಅಷ್ಟು ಜನರನ್ನು ಸೇರಿಸುವುದಕ್ಕಾಗಿ, ಪಾಪ, ಆ ವ್ಯಕ್ತಿ, ಸ್ಟೇಷನಿಗೂ ಅಲ್ಲಿಂದ ಅವರವರ ಮನೆಗೂ ಗಾಡಿ ಬಾಡಿಗೆಯನ್ನೂ ತೆರಬೇಕಾಗಿ ಬಂದರೆ, ಆಶ್ಚರ್ಯಪಡಬೇಕಾಗಿಲ್ಲ. ಒಬ್ಬೊಬ್ಬರಿಗೊಂದೊಂದು film fare ಪತ್ರಿಕೆಯನ್ನೂ ಇನಾಮು ಕೊಡಬೇಕಾಗುತ್ತದೆ, ನ್ಯಾಯವಾಗಿ ನೋಡಿದರೆ.

ಟಾ-ಟಾ ತಂಡದವರ ಕೆಲಸವೂ ಅಷ್ಟೊಂದು ಅನಾಯಾಸದ್ದೇನೂ ಅಲ್ಲ.... ಡಬ್ಬಿಯೊಳಗೆ ಕುಳಿತು ಸಿಗರೇಟ್ ಸೇದುವ ಆ ಗೆಳೆಯನನ್ನು ಎಷ್ಟೂ ಅಂತ ಹೊಗಳ್ಯಾರು ಅವರು, ತಮ್ಮ ತಮ್ಮೊಳಗೆ! ರೈಲು ಕದಲಿ ಆತ ತೊಲಗಿದ ಕೂಡಲೇ, ಅವನ ವಿಷಯದಲ್ಲಿ ಹೇಳಬೇಕೆಂದಿರುವ ಹೊಲಸು ಕಥೆಗಳು, ಜೋಕುಗಳು, ಅಡ್ಡ ಹೆಸರುಗಳು, ಅವನು ಹಿಂದಕ್ಕೆ ಕೊಡದ ಸಾಲಗಳು, ಇವುಗಳನ್ನೆಲ್ಲ ಆ ಗೆಳೆಯರು ಅದುಮಿ ಹಿಡಿಯಲು ಎಷ್ಟು ಶ್ರಮಪಡಬೇಕು, ಯೋಚಿಸಿರಿ! "ಹುಂ! ಟೈಂ ಆಯಿತು...." ಎನ್ನುತ್ತ, ಕೈ ಕುಲುಕಿ ಬೆನ್ನುತಟ್ಟಿ, ಒಂದು ಹೆಜ್ಜೆ ಹಿಂದಕ್ಕೆ ಹಾಕಿ, "ಅಂತೂ, ತೊಲಗಿದ ಶನಿ" ಎಂದು ನಿಟ್ಟುಸಿರುಬಿಟ್ಟು ತಕ್ಷಣ, ರೈಲು ಇನ್ನೂ ಅಲ್ಲೇ ಇದೆ ಎಂಬ ಅರಿವುಂಟಾಗಿ, ಬಾಯಿಗೆ ಬ್ರೇಕ್ ಹಾಕಿಕೊಳ್ಳಬೇಕಾಗುತ್ತದೆ. ಇದೊಂದು ಧರ್ಮ ಸಂಕಟವೇ ಸರಿ.

ಆ ಮೇಲಿನ್ನೊಂದು! ಊರಿಂದ ಹೊರಡುವ ಆಸಾಮಿ ಆ ಸಮಯದಲ್ಲಿ ಹೇಳುವ ಪ್ರತಿಯೊಂದು ಮಾತಿಗೂ. ಈ ಟಾ-ಟಾ ತಂಡ ನಗಬೇಕು, ಅಟ್ಟಹಾಸ ದಿಂದ ನಗಬೇಕು, ಆತನ ಬೆನ್ನುತಟ್ಟಿ ನಗಬೇಕು, ಇದು ಶಾಸ್ತ್ರ! ಅವನು ಕೊಟ್ಟ ಟಿಕೆಟ್ ಹಣ, ಉಪಾಹಾರ, ಬಂಡಿ ಬಾಡಿಗೆ, ಸಿನಿಮ ಪತ್ರಿಕೆ—ಇವುಗಳಿಗೆ ಪ್ರತಿ ಯಾಗಿ ಸಲ್ಲಿಸಲೇಬೇಕಾದ ಕಾಣಿಕೆ! ಆತನಿಗೋ, ಹೊಸ ಹಾಸ್ಯ ಯಾವುದೂ ಹೊಳೆಯುವುದೇ ಇಲ್ಲ. ಅಂತಹ ಸಂದರ್ಭದಲ್ಲಿ ಅನೇಕ ಟಾ-ಟಾ ಪ್ರವೀಣರಿಗೆ, "ಯಾಕಪ್ಪಾ ಬಂದೆವು?" ಎಂದು ಎನಿಸುವುದರಲ್ಲಿ ಆಶ್ಚರ್ಯವೇನು?

ದಿನವೂ ಪ್ಲಾಟ್‌ಫಾರಂ ಡ್ಯೂಟಿಗೆ ಸಿದ್ಧವಾಗಿ, ರೈಲಿಂದಿಳಿಯುವ, ರೈಲು ಹತ್ತುವ ಮಂದಿಗಳಲ್ಲಿ, ಮುಂದಾಳೆಂದೆನಿಸುವ ಮಹನೀಯನ ಕೊರಳಿಗೆ ಹೂಮಾಲೆ ಹಾಕಿ, ಹಲ್ಕಿರಿವ ಬೆನ್ನುರಹಿತರ ಮಾತು ಬೇರೆ! ಆಗಾಗ ಗೆಳೆಯರಿಗೆ ಟಾ-ಟಾ ಹೇಳಲು ಸ್ಟೇಷನಿಗೆ ಹೋಗುವ ಹರೆಯದ ಹುಡುಗರಿಗೂ ಬೇಜಾರು ಹಿಡಿಸು ವಂತಹುದು, ಈ 'ನಗಬೇಕೆಂಬ ನಿಯಮ'.

ಹೊರಡುವ ಆಸಾಮಿ ದಡ್ಡನೂ ಶುಂಟನೂ ಆದರೆ, ಟಾ-ಟಾ ಗುಂಪಿಗೆ ಇನ್ನೂ ಕಷ್ಟ. ಹಸುರು ಬಾವುಟ ಬೀಸುವತನಕ ಮಂಕು ಬಡಿದವನ ಹಾಗೆ ಕುಳಿತಿದ್ದು, ಆತ ಆ ಕೊನೇ ಗಳಿಗೆಯಲ್ಲಿ, "ಲೋ, ಗುಂಡಾ! ನಿನ್ನ ಬುಕ್ಸು ನನ್ನ ಟೇಬಲ್ ಮೇಲಿದೆ", "ಲೋ, ಸುಬ್ಬು! ನಿನ್ನ ಕ್ರಿಕೆಟ್ ಬ್ಯಾಟ್‌ನ ನಾನು ರಹಿಮಾನಿಗೆ ಕೊಟ್ಟಿದೇನೆ", "ಲೋ! ಪರಶೂ! ನಿನ್ನ ಗಡಿಯಾರಾನ ನಾನು ನನ್ನ ರೂಂ ಮೇಟ್ ಹತ್ತಿರ ಆಗಲೇ ನಿನಗೆ ಕೊಡು ಅಂತ..." ಎಂದು ಅರಚುವುದಕ್ಕೆ ಪ್ರಾರಂಭ. ಹಾಳಾದ್ದು ಆ ಗಲಾಟೇಲಿ ಅದು ಕೇಳಿಸುವುದೂ ಇಲ್ಲ, ಸರಿಯಾಗಿ.

—ಕಾಮತ್.

---




"ಡಾ॥ ಓ. ಗುಡ್ ಬೈ! ಸರ್"

# ಪಂಚರತ್ನ

---

ನನ್ನಯ್ಯನಂಧೋರು ಹನ್ನೆರಡು ಮಕ್ಕಳು
ಹೊನ್ನೆಯ ಮರದ ನೆರಳಲ್ಲಿ—ಸೇರುವಾಗ
ಸ್ಟ್ರೈಕ್ ಎಂಬ ಮಾತು—ದಿಟವಾಗಿ

ಪುಟ್ಹುಡ್ಗ ಪುಟ್ಹುಡ್ಗ ಯಾತರ ಪುಟ್ಹುಡ್ಗ ?
ಓನಾಮವಿಲ್ಲ, ಓದಿಲ್ಲ....ಪುಟ್ಹುಡುಗ್ಗೆ
ಹೇಳಿಸೋರುಂಟು—ಮನವಿಲ್ಲ.

ಯಾತಕಳುತಾನೆಂದು ದಡ್ಡರೇ ಕೇಳೋರು
ರಜತ ಪರದೆಯನು ಬೇಡಿ—ಕಂದಯ್ಯ
ಕಾಡಿ ಕೈಯಿಂದ ಗುದ್ಯಾನು

ಎದ್ದೊಂದು ಗಳಿಗೇಲಿ ಯಾರ್‍ಯಾರ ಮರೆಯಲಿ
ಇನ್‌ಕಂ ಟ್ಯಾಕ್ಸ್ ಸೆಳೆಯೋನ—ನಿಂತ ಕಾಲಲ್ಲೆ
ನಿಂತೊಂದು ಗಳಿಗೆ ಮರೆದೇನು!

ಜೋಗುಳ ಹಾಡಿದರೆ, ಸಿನಿಮ ಸಾಂಗೇ ಬೇಕಂತೆ!
ಹಾಲ ಹಂಬಲವ ಮರೆತಾನು !....ಈ ಪೋಲೀಗೆ
ಫಿಲಂ ಸ್ಟಾರೇ ಅತಿ ಮುದ್ದು.

—ಸಾಟಾಳಿ

---

# ಎರಡು ಪತ್ರಗಳು

(ಅ. ಕ. ವಿ. ಪ್ರೇ. ಪ)

---

ಇತ್ತೀಚೆಗೆ ನಾನು ಹೆಚ್ಚಾಗಿ ಮುಗಿಲು ಹಳ್ಳಿಗೆ ಹೋಗುತ್ತಿಲ್ಲ. ವಾರಕ್ಕೆ ಕೇವಲ ಎರಡು ಬಾರಿ ಮಾತ್ರ ಹೋಗುತ್ತಿದೇನೆ. ಅದರಿಂದ ಯಾರಿಗೂ ಏನೂ ಬಂಧಕವಾಗದಿದ್ದರೂ ಸಹ ಅ ಕ ವಿ ಪ್ರೇಪದ ಅಧ್ಯಕ್ಷರಿಗೆ ಏನೋ ಒಂದು ರೀತಿ ಮಿತ್ರ ವಿರಹವಾಗಿದೆಯೆಂದು ಕಾಣುತ್ತದೆ. ಇಲ್ಲದಿದ್ದರೆ ಅವರು ಪತ್ರ ಬರೆಯುತ್ತಿರಲಿಲ್ಲ. ಏನೋ ಒಂದೆರಡು ದಿನ ವೆಸ್ಟಿಂಡೀಸಿನವರ ಆಟ ನೋಡಿಕೊಂಡು ಬರಲೆಂದು ಬೆಂಗಳೂರಿಗೆ ಹೋದ ಹೊತ್ತಿನಲ್ಲೂ ನನ್ನನ್ನು ಕಾಡಿಸುತ್ತಿರಲಿಲ್ಲ. ಹದಿನೇಳನೇ ತಾರೀಖು ನಮ್ಮವರ ಗಟ್‌ಲೆಸ್ ಆಟ ನೋಡಿಕೊಂಡು ಬಂದ ನನ್ನನ್ನು ಅವರ ಪತ್ರ ಸ್ವಾಗತಿಸಿತು. ಅದು ಅವರ ಪತ್ರವೂ ಅಲ್ಲ. ಹುಸೇನಬೀಪ್ರಿಯ ಎಂಬ ವ್ಯಕ್ತಿ ಅವರಿಗೆ ಬರೆದ ಕಾಗದ. ಆದರಮೇಲೆ "ವಿಶ್ಲೇಶಣೆಗಾಗಿ" ಎಂಬ ಟಿಪ್ಪಣಿಯೊಂದಿಗೆ ಅದನ್ನು ಅವರು ನನಗೆ ಕಳುಹಿಸಿದ್ದರು. ಆ ಕಾಗದ ಹೀಗಿತ್ತು.

ಅಧ್ಯಕ್ಷ ಮಹಾಶಯರ ಸನ್ನಿಧಿಗೆ ಅನಂತ ವಂದನೆಗಳು.

ತಥಾಗತ,

ಇತ್ತೀಚೆಗೆ ನನ್ನ ಮಿತ್ರರಲ್ಲದ ಆರಾಸೆಯವರು ಅಕವಿಪ್ರೇಪದ ಇತಿಹಾಸವನ್ನು ರಚಿಸುತ್ತಿರುವುದು ಸರಿಯಷ್ಟೇ. ಪ್ರೇಮ ಎಂದರೇನು ? ಹೆಣ್ಣು ಗಂಡುಗಳ ವಿಲಾಸವಷ್ಟೆ ? ಹೀಗಿರಲು ಅವರು ಬರೆದಿರುವ ಲೇಖನಗಳ ಅಂತರಾರ್ಥ ಅರ್ಥ ಹೀನವಷ್ಟೆ ?

ಅದು ಹೇಗಾದರೂ ಇರಲಿ. ಅವರ ಲೇಖನಗಳ, ಅಂತರಾರ್ಥವೇನಾದರೂ ಉಂಟೇ ಎನ್ನಿಸುತ್ತದೆ. ಅವರ ಲೇಖನಗಳು ಕಾಲ್ಪನಿಕವೂ ಸ್ವಕಪೋಲ ಕಲ್ಪಿತಗಳೂ ಸತ್ಯದೂರವೂ ಆಗಿರುತ್ತವೆ ಎಂಬುದೇ ನನ್ನ ಅನುಭವ.

ನೋಡಿ, ಮೊನ್ನೆ ರಸ್ತೆಯಲ್ಲಿ ಹೋಗುತ್ತಿದ್ದೆ. ನನ್ನ ಜೊತೆ ನಮ್ಮ ಗಣಿಯನೂ ಇದ್ದ. ದಾರಿಯಲ್ಲಿ ಹುಸೇನಬೀ ಬಂದಳು. ಒಂದು ಬಾಣ ಎಸೆದಳು ನೋಡಿ! ಗಣಿಯನನ್ನು ಅಲ್ಲೇ ಬಿಟ್ಟು ಅವಳ ಹಿಂದೆ ಹೋದೆ.

ಮಾತಾಡುತ್ತಾ ಇಬ್ಬರೂ ನಿಂತೆವು. ಎಷ್ಟು ಹೊತ್ತಾಯಿತೋ ಏನು ಮಾತಾಡಿದೆನೋ, ಒಂದೂ ಗೊತ್ತಿಲ್ಲ. ಅವಳ ರೂಪವನ್ನು ಕಣ್ಣಿನಲ್ಲಿ ನುಂಗುತ್ತಾ, ಮನಸ್ಸಿನಲ್ಲಿ ಏನೇನನ್ನೋ ಲೆಕ್ಕ ಹಾಕುತ್ತಾ ನಿಂತಿದ್ದೆ. ಅದನ್ನು ಈರ್ಷಾಪೂರಿತನಾದ ಗಣಿಯ ಹುಸೇನಬೀ ಪಿತನಿಗೆ ಹೇಳಿದ. ಹುಸೇನಬೀಪಿತ ಅವಳ ಮದುವೆಯನ್ನು ಈ ದಿನ ನಿಶ್ಚಯ ಮಾಡಿದ. ವರ ನಾನಲ್ಲ. ಕತ್ತೀ ಬಾಲ! ನನಗಿರುವ ಪ್ರಾಶಸ್ತ್ಯವನ್ನು ಅವಳು ಬಿಡದಂತೆ ನೋಡಿಕೊಳ್ಳಬಲ್ಲ ಶಕ್ತಿ ನನಗಿದೆ.

ಇಷ್ಟಲ್ಲದೆ ಕಳೆದ ಗುರುವಾರ ನಮ್ಮ ಕ್ಲಾಸ್ ಸೋಷಿಯಲ್ಸ್ ಕಾಲೇಜಿನಲ್ಲಿ ನಡೆಯಿತು. ಆಗ ಹುಡುಗಿಯರಿಗೆಲ್ಲ ಅಪ್‌ಸ್ಟೇರ್ಸ್ ಮೇಲೆ ಟಿಫಿನ್ನಿಗೆ ಏರ್ಪಾಡಾಗಿತ್ತು. ಆಗ ಅವಳೇ ಇದಾಳಲ್ಲ ಕಾಯಿಪೇಟೆ ಕರಿಬಸಮ್ಮ; ಬೇಕಂತ ಡೌನ್ ಸ್ಟೇರ್ಸಿನಲ್ಲಿದ್ದ ಹುಡುಗರಮೇಲೆ ಬಾಳೆಹಣ್ಣಿನ ಸಿಪ್ಪೆ ಎಸೆದಳು. ಕೆಳಗೆ ನಿಂತಿದ್ದ ನಾವೆಲ್ಲಾ ಅವರ ಮೇಲೆ ಕಲ್ಲೆಸೆದೆವು! ನಾವೇನು ಕಡಿಮೆಯೇ? ಅವರೆಲ್ಲಾ ನಮ್ಮನ್ನೂ, ನಾವೆಲ್ಲಾ ಅವರನ್ನೂ ಬಾಯಿಗೆ ಬಂದ ಹಾಗೆ ಅಡಿಕೊಳ್ಳುತ್ತೇವೆ. ನಿಮ್ಮ ಆರಾಸೇ ಕೃತಿಗಳ ನಾಯಕ ನಾಯಕಿಯರಂತೆ ನಾವೆಲ್ಲಾ ಬೆನ್ನು ಮೂಳೆಯಿಲ್ಲದ ಹುಳುಗಳಲ್ಲ. ಅಲ್ಲದೆ ನಮ್ಮ ಲೆಕ್ಚರರು ಬೆಟ್ಟದ ಮೇಗಳಯ್ಯ, ಮೊನ್ನೆ ಬೊಂಬಾಯಿಗೆ ಹೋಗಿದ್ದು ನಿಮಗೆ ತಿಳಿದಿರಬಹುದು. ಅವನು ಊರಲ್ಲಿಲ್ಲದಷ್ಟು ದಿನ ಆ ಅರಳಿ ಕಟ್ಟೆ ಮೂಲೆಯ ಮನೆಯ ಹುಡುಗಿ ಕ್ಲಾಸಿಗೆ ಬರುತ್ತಿರಲಿಲ್ಲ. ಏಕೆ? ಬೊಂಬಾಯಿಗೆ ಹೋಗಿದ್ದಳು ಅವಳೂ.

ನಾನು ಮುಚ್ಚುಮರೆಯಿಲ್ಲದವನು. ಚೌಕಿಪೇಟೆ ಹುಡುಗ ಎಲ್ಲಿದೆ ತಥಾಗತ ನಿನ್ನ ಪ್ರೇಮ? ಅದಿಲ್ಲದೆ ವಿಫಲವಾಗುವುದೆಲ್ಲಿ ಬಂತು? ಎಲ್ಲಾ ಮೋಹ ಮೋಹದ ತೃಪ್ತಿಯೇ ಭೋಗ. ಮಾನವನಿಗೆ ತಿಳಿದಿರುವುದು ಇಷ್ಟೇ.

ಹೀಗಿರಲು ನಿಮ್ಮವನು ಏನೇನೋ ಬರೆಯುತ್ತಿದಾನೆ ಯಾರಿಗೆ ಬೇಕು ಅದೆಲ್ಲ? ನಿಲ್ಲಿಸದಿದ್ದರೆ ಗ್ರಹಚಾರ ಬಿಡಿಸಿ ಬಿಡುತ್ತೇನೆ. ನನಗೆ ಸುಳ್ಳು ಎಂದರೆ ಮೈಯೆಲ್ಲಾ ಬೆಂಕಿ ಅನೃತವನ್ನು ಹೇಳಿದವನನ್ನು ಸುಕೇಶ ಭಾರದ್ವಾಜಾ, ಸಮೂಲವಾಗಿ ನಾಶಪಡಿಸುತ್ತೇನೆ ಎಂದು ಯಾರೋ ನಮ್ಮ ಋಷಿಗಳು ಹೇಳಿಲ್ಲವೇ?

ಇಂತು ನಿಮ್ಮವನಲ್ಲದ
**ಹುಶೇನಬೀಪ್ರಿಯ.**

ಈ ಪತ್ರವನ್ನೋದಿ ನೀವೆಲ್ಲ ನಿರೀಕ್ಷಿಸಿದಂತೆ ನನಗೆ ಸಿಟ್ಟು ಬರಲಿಲ್ಲ. ಆದರೂ ಕೂಡ ಆ ಪತ್ರವನ್ನು ನಾನು ಹರಿದು ಮೂಲೆಗೆಸೆದೆ. ಬಿಳಿ ಕಾಗದ ತೆಗೆದುಕೊಂಡು ಅಧ್ಯಕ್ಷರಿಗೆ ಕಾಗದ ಬರೆದೆ. ಅದು ಹೀಗೆ :—

ತಥಾಗತ,

ನೀನು ಕಳುಹಿಸಿದ ಪತ್ರ ಬಂತು. ಹುಶೇನಬೀಪ್ರಿಯನಿಗೆ ಏನಾಗಿದೆ ಎಂದು ನಾನು ಬಲ್ಲೆ. ಆದರೆ ನಾನು ಯಾರು, ಎಂಥವನು ಎಂಬುದನ್ನು ಅವನರಿಯ. ಮುಗಿಲುಹಳ್ಳಿ ಕೆರೆಗರಡಿ ದೊಡ್ಡ ಭರಮಣ್ಣನ ಪರಮಾಪ್ತ ಶಿಷ್ಯರಾದ ನೂರಾರು ಜನ ಪೈಲ್ವಾನರು ನನ್ನ ಅನುಯಾಯಿಗಳೆಂಬುದು ಅವನಿಗೆ ಗೊತ್ತಿಲ್ಲ. ಬೆಂಗಳೂರಿಗೆ ಬರುವ ಮೊದಲು ದಾರಿಯಲ್ಲಿ ಅವರಲ್ಲಿ ಒಬ್ಬನು ಸಿಕ್ಕ "ಏನಲೇ ಕಕ್ಕರಗೊಳದ ಷಡಕಾ, ಎತ್ಲಾಗಿ ಹಾಳಾಗಿ ಹೋಗಿದೆ." ಎಂದು ಕೇಳಿದೆ. "ಗರ್ಡಿಗೋಗ್ತಿನಪಾ. ಭಾರಿ ತಯಾರಿಯೋ ನಾನು." ಯಾರಾರ ಇದ್ರೆ ತೋರ್ಸು. ತೌಡರ್ಬ್ತಿನಿ" ಎಂದು ಅವನೆಂದ. ಈ ವಿಷಯವನ್ನು ಅವನಿಗೆ ತಿಳಿಸಿರಿ.

ಇನ್ನು ಹುಶೇನಬೀಪ್ರಿಯನ ಪ್ರಶ್ನೆಯ ವಿಷಯ. ಅದೊಂದು ಪ್ರಶ್ನೆಯೇ ಅಲ್ಲ. ಪ್ರೇಮ ಎಲ್ಲಿದೆ ಎಂದವನು ಕೇಳಿದಾನೆ. ಅದು ಎಲ್ಲಿ ನೋಡಿದರೆ ಅಲ್ಲಿದೆ. ಮೋಹ, ಭೋಗಗಳ ಪಂಕದ ಮಧ್ಯದಲ್ಲರಳಿರುವ ಅವ್ಯಕ್ತ ಕಮಲ ಅದು. ಕರಿಗಣ್ಣಿಗದು ಕಾಣುವುದಿಲ್ಲ.

ಹುಶೇನಬೀಪ್ರಿಯನ ನಿಲುವನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಅದು ಅವನ ಮನಸ್ಸಿನಲ್ಲಿ ಈಗ ವ್ಯಾಪಿಸಿರುವ ಕಹಿಯನ್ನು ಹೊರಗೆಡಗಿದೆ. ಹುಶೇನಬೀಯನ್ನು ನಾನು ನೋಡಿದ್ದೆ. ಚಿನ್ನದಂತಹ ಹುಡುಗಿ. ರತಿಯಿದ್ದಹಾಗಿದ್ದಳು. ಅವಳನ್ನು ಯಾವುದೋ ಒಂದು ಮುದಿ ಗೂಬೆಗೆ ಕೊಟ್ಟು ಮದುವೆ ಮಾಡಲು ಸನ್ನಾಹ ನಡೆಯಿತು. ಅದು ಕೂಡದೆಂದು ಇವನು ವಿರೋಧಿಸಿದ. ಇವನು ಹುಶೇನಬೀಪಿತನಿಗೆ ಕಳ್ಳಲ್ಲ, ಬಳ್ಳಿಯಲ್ಲ, ಇಷ್ಟನಲ್ಲ, ಮಿತ್ರನಲ್ಲ, ಕುಲಸ್ಥನಲ್ಲ. ಅಂದಮೇಲೆ ಇವನಿಗೆ ಕಪಾಳ ಮೋಕ್ಷವಾಗಿದ್ದು ಆಶ್ಚರ್ಯವಲ್ಲ. ಹುಶೇನಬೀಯ ಮದುವೆ ನಡೆದೇ ಹೋಯಿತು. ಅಂತಹವಳಿಗೆ ಒದಗಿದ ಇಂತಹ ಗತಿಯನ್ನು ಚಿಂತಿಸಿ ಚಿಂತಿಸಿ ಇವನು ಬೆಂಡಾದ. ಅವಳ ಚಿಂತನೆಯಲ್ಲೇ ಮಗ್ನನಾದ ಇವನಿಗೆ ಅವಳಲ್ಲಿ ಅನುರಾಗ ಉದಿಸಿದ್ದು ಏನಾಶ್ಚರ್ಯ? Disappointment in second degree ಎಂಬ ಲೇಖನದಲ್ಲಿ ನಾನು ಈ ಬಗ್ಗೆ ವಿಸ್ತಾರವಾದ ಪ್ರತಿಪಾದನೆ ನಡೆಸಿದೇನೆ ಆ ಕಹಿಯೇ ಇವನು ಈ ಕಾಗದ ಬರೆಯುವಂತೆ ಮಾಡಿದ್ದು. ಪ್ರೇಮ ಎಲ್ಲಿದೆ? ಎಂಬ ಪ್ರಶ್ನೆಗೆ ನಿನ್ನ ಹೃದಯಾಂತರಾಳದಲ್ಲಿ ಎಂದೇ ಅವನಿಗೆ ಉತ್ತರ.

ಪ್ರೇಮ ಎಲ್ಲೆಲ್ಲಿಯೂ ಇದೆ ಎಂದು ಮೊದಲೇ ಬರೆದಿದ್ದೆನಲ್ಲವೆ, ಅದು ದಿಟ ಎನ್ನಲು ಒಂದು ಉದಾಹರಣೆ. ಹುಶೇನಬೀಪ್ರಿಯನ ಈರ್ಷಾಯುಕ್ತ ಮಿತ್ರ ಗಣಿಯ (ಗಣೇಶ) ನಲ್ಲೂ ಅದು ಕಂಡು ಬಂತು. ಅವನೂ ಕೂಡ ಕ್ರಿಕೆಟ್ ಮ್ಯಾಚ್ ನೋಡಲು ಬೆಂಗಳೂರಿಗೆ ಬಂದಿದ್ದ. ಎರಡನೇ ದಿವಸದ ನಮ್ಮವರ ಆಟ

ನೋಡಿ ಅವನಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದಿತ್ತು. ನಾನೂ ಅವನೂ ಆ ಸಂಜೆ ಆಟ ಮುಗಿದ ಮೇಲೆ ಸೆಂಟ್ರಲ್ ಜೈಲ್ ರಸ್ತೆಯಲ್ಲಿ ಹೋಗುತ್ತಿದ್ದೆವು. ಹವಾ ಅಮೋಘವಾಗಿತ್ತು. ಹಿತಕರವಾದ ಸಂಜೆ. ಮರಗಳ ಮೇಲೆ ಹೊಂಬಿಸಿಲು. ರಸ್ತೆಯಲ್ಲಿ ಜನ ಕುರಿ ಮಂದೆಯಂತೆ ಕಿಕ್ಕಿರಿದಿದ್ದರು. ನಮ್ಮೆದುರಿಗೇ ಇಬ್ಬರು ತರುಣಿಯರು ಹೋಗುತ್ತಿದ್ದರು. ಅವರಲ್ಲೊಬ್ಬಳು (ಹವಾದಷ್ಟೇ ಹಿತಕರವಾದ ರೂಪವನ್ನುಳ್ಳವಳು) ಇನ್ನೊಬ್ಬಳಿಗೆ ಹೇಳಿದಳು "ನಾನಂತೂ ಇಪ್ಪತ್ತನೇ ತಾರೀಖು ಮೇಲೆ ಟ್ರೈನಲ್ಲಿ ಮದ್ರಾಸಿಗೆ ಹೋಗ್ತೀನಿ.ಮ್ಮಾ ಟೆಸ್ಟ್ ಮ್ಯಾಚ್‌ನಲ್ಲಿ ರಾಂಚಂದ್ ಉಮ್ರಿಗರ್ ಎಲ್ಲಾ ಬ್ಯಾಟ್ ಮಾಡೋದು ನೋಡೇ ನೋಡ್ಬೇಕು." ಮಾಮೂಲಿ ಮಾತು ಅದು. ಆದರೆ ಗಣೆಯನ ಮೇಲೆ ಅದು ತೀವ್ರವಾದ ಪ್ರಭಾವ ಬೀರಿತ್ತು. ಅವನು ನನ್ನ ಬೆನ್ನಮೇಲೆ ಗುದ್ದಿದ "ಲೇ, ನಾನೂ ಹೋಗ್ತೀನೋ ಇಪ್ಪತ್ನೇ ತಾರೀಖು ಮದ್ರಾಸಿಗೆ" ಎಂದ ತಮಿಳರಸು ಕಜಗಂ, ನಾಂತಮಿಳರ್, ದ್ರಾವಿಡ ಕಳಗಂ ಮೊದಲಾದ ಸಂಘಗಳಿರುವ ಆ ಊರಿನಲ್ಲಿ, ಈ ಊರಿನ ಶುದ್ಧ ಕನ್ನಡಿತಿ ತರುಣಿಗೆ ಏನೂ ಅಪ್ರೋಹ ತಟ್ಟದಂತೆ ತಾನು ಕಾವಲಾಗಿರುವುದಾಗಿ ತಿಳಿಸಿ, ಛಾರ್ಜಿಗೆ ನನ್ನನ್ನು ದುಡ್ಡು ಕೇಳಿದ—ಶಿವರಾತ್ರಿ ಹೋಗಿ ಗೋಕುಲಾಷ್ಟಮಿ ಊಟಕ್ಕೆ ಹಾಕು ಎಂದು ಕೇಳಿದ ಹಾಗೆ. ಗಣೆಯನದೀಗ ಶುದ್ಧ, ನಿಷ್ಕಲ್ಮಷ, ಆದರ್ಶಪ್ರೇಮ. ಅನಾಸಕ್ತಿಯೋಗಿಯವನು.

ಇನ್ನು, ಇದೇ ಹುಸೇನಬೀಪ್ರಿಯನ ಇನ್ನೊಬ್ಬ ಮಿತ್ರನಿದಾನೆ—ವಸಂತ ಪ್ರಿಯ ಅಂತ ಅವನ ಹೆಸರು. ಅವನು ಇಬ್ಬರನ್ನು ಪ್ರೀತಿಸಿದ. ಇಬ್ಬರೂ ಬೊಂಬಾಯಿಯಲ್ಲಿದಾರೆ. ಆದರೂ ಅವನ ಪ್ರೇಮ ಎಳ್ಳಷ್ಟೂ ಕೊಂಕಿಲ್ಲ. ಅಂಥ ಅವನು ಮೊನ್ನೆ ನನ್ನ ಕೋಣೆಗೆ ಬಂದಾಗ ನನ್ನಲ್ಲಿದ್ದ ಹಳೆಯ ಫಿಲ್ಮ್ ಫೇರ್ ಒಂದನ್ನು ಹಿಡಿದುಕೊಂಡು ಹಾಳೆ ತಿರುವಿಹಾಕುತ್ತಿದ್ದಾಗ ಇಂಗರ್ ಸ್ಟೀವನ್ಸ್ ಚಿತ್ರ ಅವನ ಕಣ್ಣಿಗೆ ಬಿತ್ತು. ಆ ಕೂಡಲೇ ಅವನು ಮೂರಡಿ ಮೇಲಕ್ಕೆ ಹಾರಿದ. ಪ್ರೇಮಬಾಣ ಅವನೆದೆಗೆ ನಾಟಿತ್ತು ಅವನೀಗ ಪ್ರೇಮಿ. ಅವನು ಮೂವರನ್ನೂ ಪ್ರೀತಿಸುತ್ತಾನೆ. ಆದರೆ ಅದು ಮೋಹವಲ್ಲ. ಗುಣಾರಾಧನೆ ಅದು ಪ್ಲೆಟಾನಿಕ್ ವ್ಯವಹಾರ ವ್ಯಕ್ತಿಗಳು ನಿಮಿತ್ತ ಮಾತ್ರ.

ನಾನು ಬರೆದುದನ್ನು ತಾವು ಅರ್ಥ ಮಾಡಿಕೊಂಡೀರಿ ಆದರೆ ಹುಸೇನಬೀ ಪ್ರಿಯನಿಗೆ ಅದು ಅರ್ಥವಾದೀತೇ?

ಹುಸೇನಬೀಪ್ರಿಯನಲ್ಲಿ ಪ್ರೇಮವಿನ್ನೂ ವಿಕಸಿಸಿಲ್ಲ. ಅವನೇನೋ ವಿಫಲಪ್ರೇಮಿಯಾದ. ನಿಜ. ಸಹಾನುಭೂತಿ ತೋರಿಸೋಣ. ಆದರೆ ತಾನು ಪ್ರೇಮದಲ್ಲಿ ವಿಫಲವಾದ ಮಾತ್ರಕ್ಕೆ ತನ್ನ ಮನಸ್ಸನ್ನು ಕಹಿ ಮಾಡಿಕೊಳ್ಳುವುದೇ? ಆ ಕಹಿ

ಹೋಗದ ಹೊರತು ಮೋಹ, ಮೋಹವಾಗಿಯೇ ಉಳಿಯುತ್ತದೆ. ಎಲ್ಲಿಯೂ ಪ್ರೇಮ ಕಾಣಲಾರದು.

ಆದುದರಿಂದ, ತಥಾಗತ ಹುಸೇನಬೀಪ್ರಿಯನಿಗೆ ಮಾರ್ಗದರ್ಶನ ಮಾಡಿ, ಅವನ ಭಾವ ದುರಂತವನ್ನು ತಪ್ಪಿಸು.

ತಿಳಿದಂಥ ನಿನಗೆ ಹೆಚ್ಚಿಗೆ ಬರೆಯಲು ಶಕ್ತನಲ್ಲ.

ಇಂತು ನಿನ್ನವ,
ಅ ರಾ. ಸೆ.

---



ವಿನೋಬಾಜೀಯವರು ನಮ್ಮ ಗ್ರಾಮಕ್ಕೆ ಬರ್ತಾರೆ. ನಂಗೂ ಜಮೀನು ಬಿಟ್ಟಿ ಸಿಗುತ್ತೆ. ಒಂದು ನೂರು ಸಾಲ ಕೊಡಯ್ಯಾ—ಈಗ ಕುದುರೆ ಜೂಜಿಗೆ ಹೋಗಬೇಕು

# ಬೀಳ್ಕೊಡುಗೆ

—

(ಮ್ಯಾಕ್ಸ್ ಬೀರ್‌ಭಾಮ್‌ನ ನೆರಳು ಕಾಣಿಸುತ್ತೀ ?)

"ನಯನದಲ್ಲಿ ನಿಮ್ಮ ಮೂರುತಿ ತುಂಬಿ ಕಿವಿಯಲ್ಲಿ ಕೀರುತಿ ತುಂಬಿ ಮನದಲ್ಲಿ ನೆನಹು ತುಂಬಿ" ಎಂದು ಒಳದನಿಯೊಂದು ಹಾಡುತ್ತಿತ್ತು. ಇನ್ನೂ ಕಾಲ ತುಂಬಿ ಬಂದಿರಲಿಲ್ಲ. ಗಾರ್ಡಿನ ಸುಳಿವಿರಲಿಲ್ಲ ಎಂಜನ್ನಿನ ಕೂಗಿಲ್ಲ

ನೋಡಿ ನೋಡಿ ನಯನಗಳು ಅರೆಮುಚ್ಚಿ ಬಾಯ್ದೆರೆದು ಕೈ ಕೈ ಹಿಸುಕ ಲಾರಂಭಿಸಿದ್ದೆವು. ಅಷ್ಟರಲ್ಲೆ ನಿದ್ರಾಭಂಗ ಮಾಡಿದ ಮಿತ್ರನೊಬ್ಬ.

"ಕೂಡಲು ಸಾಕಷ್ಟು ಜಾಗವುಂಟಲ್ಲಾ ?"

ಕಂಪಾರ್ಟಮೆಂಟಗೆಲ್ಲಾ ಒಬ್ಬನೆ ಕುಳಿತಿದ್ದುದು ಆತನಿಗೂ ಕಂಡಿರಲಿಕ್ಕೆ ಸಾಕು. ಆದರೂ ಸಮಯ ಜಾರಬೇಕಲ್ಲಾ !

"ಎಲ್ಲಿಯಾದರೂ ಇಳಿದು ಭೋಜನ ಮಾಡಿಬಿಡ್ರಿ"
"ಅರಸೀಕೆರೆ ಉಂಟಲ್ಲಾ"

"ಸಾಮಾನು ಮಾತ್ರ ಜೋಪಾನ"

ಹೀಗೇ ದಡ್ಡರಂತೆ ಹರಟುತ್ತಿದ್ದರು ಬೀಳ್ಕೊಡಲು ಸೇರಿದ್ದ ಗೆಳೆಯರು ರೈಲು ಇನ್ನೂ ಹೊರಟಿರಲಿಲ್ಲ.

ಮನೆಯ ಹೊಸ್ತಿಲ ಮೇಲೆ ನಿಂತು, ಗೇಟಿನ ಬಳಿ ನಿಂತು ಬೀಳ್ಕೊಡುವುದು ಸುಲಭ. ಬಹು ಸುಲಭ. ಕ್ಲಬ್ಬಿನಲ್ಲಿ ಪಾರ್ಟಿಯಾದಮೇಲೆ ಬೀಳ್ಕೊಡುಗೆ ಮತ್ತು ಸುಲಭ. ಆದರೆ ಇಲ್ಲಿ ರೈಲ್ವೆ ನಿಲ್ದಾಣದಲ್ಲಿ. ಒಬ್ಬರನ್ನೊಬ್ಬರು ಮಿಕಿ ಮಿಕಿ ಎಂದು ನೋಡುತ್ತಾ ನಿಲ್ಲುವುದು. ನೀವೂ ಅನುಭವಿಸಿರಬಹುದು ಈ ತ್ರಿಶಂಕು ಸ್ವರ್ಗವನ್ನು ಅಬ್ಬಾ : ಇದನ್ನಾರು ಕಂಡು ಹಿಡಿದವರೋ. ರೈಲು ಬರುವುದು· ಹೊರಡುವುದು ತಡವಾದರಂತೂ ಪೆರುಮಾಳೆ ಗತಿ. ಇಷ್ಟಕ್ಕೂ ನಮ್ಮ ಗೆಳೆಯರು ಹೊರಟಿದ್ದು ಆಫ್ರಿಕಾಕ್ಕಲ್ಲ ಅಂಡಮಾನಿಗಲ್ಲ ಬರಿಯ ಬೆಂಗಳೂರಿಗೆ, ಸಾಹಿತಿಗಳ ಸಮ್ಮೇಳನಕ್ಕೆ.

ಕೊನೆಗೊಮ್ಮೆ ಇಂಜಿನ್ನು ಕೂಗು ಹಾಕಿತ್ತು. ಗಾರ್ಡಿನ ಆಗಮನವಾಯಿತು. ನಮ್ಮ ಗೆಳೆಯರು ಸಮಾಧಾನದ ನಿಟ್ಟುಸಿರು ಬಿಡುತ್ತಾ ಹಿಂದಕ್ಕೆ ಒರಗಿಕೊಂಡರು.

ರೈಲು ಹಿಂದಕ್ಕೂ ಮುಂದಕ್ಕೂ ತೂಗಾಡಿತು.

"ಹಿಂದೆ-ಹಿಂದೆ ನಿಲ್ಲಿ ಸಾರ್" ಅಷ್ಟರಲ್ಲೇ ಕೇಳಿಬಂತು.

ನಮ್ಮಿಂದ ತುಸು ದೂರದಲ್ಲಿ ಒಬ್ಬಾತ ಯಾರನ್ನೋ ಬೀಳ್ಕೊಡುವ ಪ್ರಸಂಗ ಸಾಗಿತ್ತು.

ಪ್ರಾಯಶಃ ಆತನ ಅರ್ಧಾಂಗಿಯನ್ನೇನೋ ?

ರೈಲು ಮಂದ ಗಮನದಿಂದ ಮುಂದೆ ಮುಂದೆ ಸಾಗಿತು. ಮುತ್ತಿನಂತಹ ಹನಿಗಳೆರಡು ಆಕೆಯ ಕಪೋಲದ ಮೇಲೆ ಉರುಳಿ ಕರಚೀಫಿನಲ್ಲಿ ಕಣ್ಮರೆಯಾದವು.

ಆತನ ದೃಷ್ಟಿ ರೈಲಿನೊಡನೆ ಓಡಿತ್ತು.

ಕಟ್ಟುಮಸ್ತಾದ ಆತನ ದೇಹ ಯಾರದ್ದೋ ನೆನಪು ತರುವಂತಿತ್ತು. ಅಹಾ! ಆತನೇ ಸಂದೇಹವೇ ಇಲ್ಲ. ವೀರಣ್ಣೋರ ಕಂಪನೀಲಿ ಭೀಮ ಅಥವ ಕೀಚಕ ಪಾತ್ರಧಾರಿ. ಕಣ್ಣರಳಿಸಿ ನೋಡಿದೆ. ಆಗಿನ ಆತನಿಗೂ ಈಗಿನ ಈತನಿಗೂ ಎಲ್ಲಿಯ ಸಾಮ್ಯ "ಆ ಜುಟ್ಟು, ಕೊಳಕು ಪಾಣಿಪಂಚೆ, ಹರಕು ಜುಬ್ಬ, ತುಂಡು ಬೀಡಿ ಈಗಿನ ಕ್ರಾಪು, ಸೂಟು! ಬೂಟು! ಸಿಗರೇಟು! ಕರಿಯ ಕನ್ನಡಕ! ಆತ ತಿರುಗಿದ. ನೋಡಿದ. ಗುರುತಿಸಿದ.

"ನಮಸ್ಕಾರ ಸಾರ್"

"ನಮಸ್ಕಾರಪ್ಪಾ, ತುಂಬಾ ದಿನವಾಯ್ತು ನೋಡಿ. ಈಗ ನಾಟ್ಕದ ಕಂಪ್ನೀಲಿ ಇಲ್ವೇ. ತುಂಬಾ ಚೆನ್ನಾಗಿ ಆಕ್ಟ್ ಮಾಡ್ತಿದ್ಯಪ್ಪ ರಂಗಭೂಮಿ ಮೇಲೆ"

ಅಹ್ಹಹ್ಹ ಹೌದು ಸಾರ್ ಎಲ್ರೂ ಆಗಂತಾರೆ ರಂಗಭೂಮಿಮೇಲೆ ಮಾಡೋದು ಬಿಟ್ಬಿಟ್ಟೆ ಸಾರ್ ಈಗ ರೈಲ್ವೆ ನಿಲ್ದಾಣದ ಮೇಲೆ ಆಕ್ಟ್ ಮಾಡ್ತೀನಿ."

ಹಾಗಂದ್ರೆ? ನಿಜಕ್ಕೂ ಅರ್ಥವಾಗಿರಲಿಲ್ಲ.

"ಏನಿಲ್ಲ ಸಾರ್ ಈ ಊರಿಗೆ ಸರಕಾರಿ ಆಫೀಸರುಗಳು ಬರೋದು ಗೊತ್ತಲ್ಲ. ಅವರು ಪುನಃ ವರ್ಗವಾಗಿ ಹಿಂತಿರ್ಗೋವಾಗ ಅವರ್ಗೆ ತಕ್ಕ 'ಸನ್ಮಾನ ಮಾಡೋ ಸಂಘ ಒಂದನ್ನು ಮಾಡ್ಕೊಂಡಿದೇವೆ. ನಾನೇ ಅದರ ಚಾಲಕ. ಹಾಗೆ ವರ್ಗ ವಾದೋರು 100 ರೂ. ನಮ್ಮ ಆಫೀಸ್ನಲ್ಲಿ ಕಟ್ಬಿಟ್ರೆ ಸಾಕು ಅವರಿಗೆ ಭೋಜನ

ಕೂಟ ಏರ್ಪಾಟು ಮಾಡಿ, ಹಾರ ತುರಾಯಿ ಕೊಟ್ಟು ಮುಖ್ಯ ಮುಖ್ಯವಾದ ದಿನ ಪತ್ರಿಕೆಗಳಲ್ಲಿ ಫೋಟೋ ಹಾಕ್ಸಿ. ರೈಲ್ವೆ ನಿಲ್ದಾಣದವರೆಗೂ ಬಂದು ಬೀಳ್ಕೊಟ್ಟು ಈಗ ತಾನೆ ನೋಡಿದ್ರಲ್ಲ ಆಕೆ ..."

"ನನ್ನೂ ನಿಮ್ಮ ಸಂಘಕ್ಕೆ....employee ಆದ್ರೂ ಪರವಾಗಿಲ್ಲ" ಎಂದೆ ನಾನು. "ಓಹೋ! ಆದರೆ ಬೀಳ್ಕೊಡುವ ಸೀಸನ್ನು ಆಗೆ ಹೋಗ್ಬಿಡ್ತೈಲ್ಲಾ ಎಂದು ಪೇಚಾಡಿದ" ಮುಂಚೆ ಆರು ತಿಂಗಳಾದ್ರೂ ಟ್ರೈನಿಂಗ್ ಆಗ್ಬೇಕು ಸಾರ್" ಎನ್ನುತ್ತ ಮಖಮಲ್ಲಿನ ಹೊದಿಕೆಯ ಡೈರಿ ಒಂದನ್ನು ತೆಗೆದು ನೋಡಿ ಭಾನುವಾರ ಬೆಳಿಗ್ಗೆ 20 ನಿಮಿಷ ಗುರುವಾರ ರಾತ್ರಿ ಹತ್ತು ನಿಮಿಷ ಬನ್ನಿಸಾರ್." ಎಂದ.

ನಾನು ಆತನನ್ನೆ ನೋಡುತ್ತಾ ನಿಂತಿದ್ದೆ.

—"ಪಾಪ"

---

**ಹಿಂದೆ ಕೇಳಿದ್ದರೆ—ಕ್ಷಮಿಸಿ**

ಏನನ್ಯಾಯ ಅಂದರೆ—ಈ ಹಾಳು ಕುಡಿಯೋದಕ್ಕೆ ಹಾಕ್ಕೋ ದುಡ್ಡಿನಲ್ಲಿ ಸ್ವಲ್ಪ ದುಡ್ಡು ಕೊಟ್ರೆ—ಮನೆಗೆ ಸೀಮೆ ಎಣ್ಣೆಯಾದ್ರೂ ತರಬೋದಲ್ಲಾ !"

ಹಾಗಾದ್ರೆ—ನಂಗೆ ಸೀಮೆಯೆಣ್ಣೇನೂ ಕುಡಿಸ್ಬೇಕೂಂತ ಇದ್ದೀಯೇನು?"

• • •

# ಕೊರವೇಶ್ವರ ವಚನಗಳು

(ಕಿರಿಕೆಟ್ಟು ಮ್ಯಾಚಿನ ಕುರಿತು)

---

ಕಿರಿಕೆಟ್ಟು ಆಡುವ ಮಂದಿ ಹದಿಮೂರೊ ಇಪ್ಪತ್ತೆರಡೊ (ಅಂಪೈರು ಬೆರ್ಚಪ್ಪಗಳೆರಡಿರಲಿ ಬೇಕಾದರೆ) ಆದರೆ ನೋಡುವ ಮಂದಿಯೋ ಸಾವಿರ ಹತ್ತುಸಾವಿರ! ಆಡುವವರ ಕೈಕಾಲಿಗೆ ಒಂದಿಷ್ಟು ಬಲವಾದರೂ ಉಂಟು ನೋಡುತ್ತ ಹಲ್ಗಿರಿಯುವವರಿಗೆ ಕಡಲೆಕಾಯಿ ಐಸ್‌ಕ್ರೀಮುಗಳ ನಂಟು ಎಂದು ಮೂದಲಿಸುವ ಮುದಿ ಗೂಬೆಯನು ಕಂಡು ನೌಜವಾನನೊಬ್ಬ ಒಲು ರೇಗಿ "ದೇವ ನೊಬ್ಬನಾದರೇನು ಭಕ್ತರು ಹಲವರಿಲ್ಲವೇ ?" ಎಂದು ಪ್ರತಿಭಟಿಸುವುದ ಕಂಡ ಕೊರವೇಶ್ವರ.

ಎನ್ನ ಕಾಯವ ಬ್ಯಾಟಾಗಿ ಮಾಡಯ್ಯ, ಶಿರವ ಬಾಲಾಗಿ ರೂಪಿಸಯ್ಯ ಕೈಕಾಲುಗಳ ವಿಕೆಟ್ಟಾರಾಗಿ ಮಾಡಯ್ಯ, ಪ್ಯಾಡು ಗ್ಲೌಸ್ ಸಂಪುಗಳಿಂದ ನನ್ನ ಅಂಗಾಂಗಳ ಕಡೆಸಯ್ಯ ಧರೆಯೆಲ್ಲವನು ಕ್ರಿಕೆಟ್ ಗ್ರೌಂಡಾಗಿ ಮಾಡಯ್ಯ ಎಂದು ಭಕ್ತನೊಬ್ಬ ಬೇಡಿಕೊಂಬುದ ಕಂಡ ಕೊರವೇಶ್ವರ.

ಎಲ್ಲರೂ ಧೀರರೂ, ಎಲ್ಲರೂ ವೀರರೂ, ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು! ಕಿರಿಕೆಟ್ಟಿನ ಭಕ್ತರಿಗೆ ಬ್ಯಾಟೆ ದೇವತೆ, ಬಾಲೆ ದೈವ, ಅದನೆತ್ತಿ ಒಗೆದು ಬಡಿದು ಓಡಾಡುವವರೆ ಅಧಿರಥ ಮಹಾ ರಥರು! ಏನಿದು ಸೋಜಿಗವೆಂದು ಕಣ್ಣ ಮಿಟುಕಿಸುವ ನಮ್ಮ ಕೊರವೇಶ್ವರ.

ದೇವಲೋಕ ಮರ್ತ್ಯಲೋಕವೆಂದರೆ ಬೇರಲ್ಲ ಕಾಣಿರೋ! ಕಿರಿಕೆಟ್ಟು ಇರುವಲ್ಲಿಯೇ ಮರ್ತ್ಯಲೋಕ; ಇಲ್ಲದಿರುವಲ್ಲಿಯೇ ಹಾಳು ದೇವಲೋಕ! ಹೌಸಾಟ್ ಎಂಬ ರವ ಕೇಳಿಬರದಲ್ಲಿ; ಬೌಂಡರಿ, ರನ್ನು, ನೋ ಬಾಲು ಕ್ಯಾಚುಗಳ ಸದ್ದೆ ಇಲ್ಲದಿರುವಲ್ಲಿ ಸ್ವರ್ಗವಾದರು ಏತಕಯ್ಯ? ಈ ಮರ್ತ್ಯಲೋಕವೆ ಸಾಕೆನಗೆ ಎಂದು ಕ್ರಿಕೆಟ್ ಭಕ್ತ ಭಾವ ಸಮಾಧಿಯಲಿ ಮುಳುಗಿದುದ ಕಂಡು ಬೆರಗಾದ ನಮ್ಮ ಕೊರವೇಶ್ವರ.

ಅಕಟಕಟ! ಅಂಪೈರೆ ನಿನಗಿನಿತು ಕರುಣವಿಲ್ಲ. ರಾಯ್, ಮಾಂಜ್ರೇಕರ, ಸೋಬರ್ಸ್, ಕನ್ನೆಯಾದಿಗಳ ರನ್‌ಔಟೆಂದು ಸಾರಿದೆಯಲ್ಲ; ನಮ್ಮ ಉತ್ಸಾಹಕ್ಕೆಲ್ಲ

ತಣ್ಣೀರೆರಚಿದೆಯಲ್ಲ ನಿನಗೆ ಹೃದಯವೆಂಬುದಿಲ್ಲವೇ ಎಂದು ಭಾವ ಸಮಾಧಿಯಿಂದೆಚ್ಚತ್ತ ಭಕ್ತ ಹಲುಬುವುದ ಕಂಡ ಕೊರವೇಶ್ವರ.

ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ ಮಾಚು ವಿಜೃಂಭಿಸುತಿರಲು, ಕಾಮೆಂಟ್ರಿ ಕೂಗುತಲಿರಲು ಹೈದರೈದಾರು ಕ್ಲಾಸೊಳು ಕುಳಿತು ಅಲ್ಜೀಬ್ರ, ಹಿಸ್ಟ್ರಿಗಳ ಹೊಟ್ಟ್ರಿ ಜಗತ್ತಿನಲಿ ಸಮಯ ಸವೆಸುವುದಕಂಡು ಕನಿಕರಿಸುವನು ಭಕ್ತರೊಡನೆ ನಮ್ಮ ಕೊರವೇಶ್ವರ.

ಹೋಟಲೊಳಗೂ ನೀನೆ, ಪಾರ್ಕಿನೊಳಗೂ ನೀನೆ ಕಾಲೇಜು ರೂಮೊಳಗು ನೀನೆ, ಕ್ಲಬ್ಬಿನೊಳಗೂ ನೀನೆ ಮನೆ ಮನೆಗಳೊಳಗಿಂದ ಗುಣುಗುಣಿಸುವುದೂ ನೀನೆ, ಕಾಮೆಂಟ್ರಿ ದೇವತೆಯೆ ಸರ್ವಾಂತರ್ಯಾಮಿಯಾದೆಯಯ್ಯ ಎಂದು ಕಿವಿ ಮುಚ್ಚುವುದ ಕಂಡ ನಮ್ಮ ಕೊರವೇಶ್ವರ.

ಉಳ್ಳವರು ಎಲ್ಲಂದರಲ್ಲಿಗೆ ರೈಲಿನಲಿ, ಬಸ್ಸಿನಲಿ, ಕಾರಿನಲಿ, ಪ್ಲೇನಿನಲಿ ನುಗ್ಗಿ ಮ್ಯಾಚನೇ ಕಾಂಬರಯ್ಯ, ಇನ್ನು ಹಲವರು ಮನೆಯೊಳಗೆ ಮೂಲೆಯೊಳು ಕುಳಿತು ಕಾಮೆಂಟ್ರಿಗೆ ಕಿವಿಗೊಟ್ಟು ಬ್ರಹ್ಮಾನಂದದಲಿ ಮುಳುಗುವರಯ್ಯ; ನನಗೋ ಈ ಹೋಟಲ್ ಬಾಗಿಲೇ ಗತಿಯಾಯಿತಯ್ಯ ಕಾಮೆಂಟ್ರಿಯಿಡೋ ಎಂದು ಬೇಡಿಕೊಂಡರೆ ಈ ಧೂರ್ತ ಕ್ಯಾಶಿಯರ್ ಕ್ಯಾಟ್ ಮಾನೆ ಬಿಲ್ಲಿ" ಎಂದು ಬಡಕೊಂಬುದ ಕೇಳಿರಯ್ಯ ಎಂದು ಬಡತಾಯಿ ಮಗನೊಬ್ಬ ಗೋಗರಿಯುವುದ ಕಂಡನಯ್ಯ ನಮ್ಮ ಕೊರವೇಶ್ವರ.

—ರಾಮಿ

---

ಐಕ್—ಮಿಕೊಯನ್ ಭೇಟಿ ಸೌಹಾರ್ದ ಪೂರ್ಣವಾಗಿತ್ತಂತೆ

—ಈ ಸರ್ಕಾಸ್ ಮಾಡಿಸಿದಾಗ ಅಲ್ಲೀ ಡಲ್ಲೆಸರು ಎಚ್ಚರವಾಗಿದ್ದರಂತೆ.

* * *

ಈಗ ವೈದ್ಯರುಗಳು ಪುಟಾಣಿ ರೇಡಿಯೋ ಸೆಟ್ಟನ್ನು ರೋಗಿಗೆ ನುಂಗಿಸಿ ಹೊಟ್ಟೆಯಲ್ಲಿರುವುದನ್ನು ಕೇಳಿ ತಿಳಿದುಕೊಳ್ಳುತ್ತಾರಂತೆ.

—ನಮ್ಮತ್ತೆ ಇಂತಹದನ್ನೇ ನುಂಗಿರಬೇಕು, ಆ ರೇಡಿಯೋವೇ ಆಕೆಯ ಬಾಯಲ್ಲಿ ನಿಲುಗಡೆಯಿಲ್ಲದೆ ಮಾತನಾಡಿಸುತ್ತಿರಬೇಕು!

# (ಅ) ನೀತಿ ಚಿಂತಾಮಣಿ

## ೧ನೇ ಪ್ರಕರಣ

---

"ದೇವರು ಎಲ್ಲಾ ಕಡೆಯಲ್ಲೂ ಇದ್ದಾನೆ"
ಮೇಲೆ ನೋಡಿದರು (ಹ) ರಾಮ
ಕೆಳಗೆ ನೋಡಿದರು (ಹ) ರಾಮ
ಎಲ್ಲೆಲ್ಲಿ ನೋಡಿದರೂ (ಪಂಗ) ನಾಮ ||

ಪುರಂದರ ದಾಸರು ಈಗಿನ ಪ್ರಜಾ ಪ್ರಭುತ್ವದ ಪಾಡು ಪಟ್ಟಿದ್ದರೆ ಪಾಮರರಿಗೆ ಈ ರೀತಿ ಭೋದಿಸುತ್ತಿದ್ದರು. ಆದರೆ ನಮ್ಮ ನೀತಿ ಚಿಂತಾಮಣಿ ಕರ್ತರು ಕಟ್ಟಿರುವ ಕಥೆಗಳನ್ನು ಓದಿ ಯೋಚಿಸಿದರೆ, ಆ ಕಾಲದಲ್ಲೂ ದೇವರ ಬದಲು ಎಲ್ಲೆಲ್ಲೂ ಅನ್ಯಾಯವೇ ಇತ್ತು ಎಂದು ವಿದಿತವಾಗುತ್ತದೆ. ಮೀಸೆ ಬರದ ಹುಡುಗರಿಗೆ, ಮೀಸೆ ಉದುರಿದ ಅರಹೊಟ್ಟೆಯ ಗುರುಗಳು ಭೋದಿಸುವ ಕಥೆಗಳು ಎಷ್ಟು ಅನ್ಯಾಯದ ಪ್ರಸಂಗಗಳನ್ನು ಒಳಗೊಂಡಿವೆ ಎಂಬುದು "ನೀತಿ ಪಾಠ" ದ ಮೊದಲನೆಯ ಕಥೆಯಾದ ಪ್ರಹ್ಲಾದ ಚರಿತ್ರೆಯಿಂದ ತಿಳಿದು ಬರುತ್ತೆ.

ಜಯ ವಿಜಯರು ಯಾವ ರಾಜಕೀಯ ಪಕ್ಷಕ್ಕೂ ಸೇರದ ನಿಶ್ಚಿತ ಕಾರ್ಮಿಕರು. ನಾರಾಯಣನು ಆ ಕಾಲದಲ್ಲಿ Bother ಇಸುವ ಭೇಟಿಗಾರರನ್ನು ತಡೆಗಟ್ಟಲು ಜಯ ವಿಜಯರಿಗೆ ಸಂಬಳ ಪ್ರಿಯತೆ ಭತ್ಯ, ಮಾಮೂಲ್ ಬೋನಸ್ ಇತ್ಯಾದಿಗಳನ್ನು ಕೊಟ್ಟು ವಲಿಸಿಕೊಂಡಿದ್ದನು. ಒಂದು ದಿನ ನಾರಾಯಣನು ಟೈಪಿಸ್ಟ್ ಲಕ್ಷ್ಮಿಯೊಂದಿಗೆ ರಹಸ್ಯ ವಿಚಾರದಲ್ಲಿರಲು ಶನಕಾದಿ ಋಷಿಗಳು ಶನಿಯಂತೆ ವಕ್ಕರಿಸಿದರು. ನಾರಾಯಣನ ಬಾಗಲಿಲ್ಲದ ಒಳ ಕೊಠಡಿಯನ್ನು ಮೊಗಲರ ಕಾಲದ ಶಿಖಂಡಿಗಳಂತೆ ಕಾಯುತ್ತಿದ್ದ ಜಯ ವಿಜಯರು ಅವರನ್ನು ತಡೆದರು. ಮದುವೆಯಾದ ಮೇನಕೆ ಮತ್ತಿತರ ಅಪ್ಸರೆಯರ ಅನುಗ್ರಹವಿಲ್ಲದೆ "ರಹಸ್ಯ ಟೈಪಿಂಗ್" ಎಂದರೆ ಏನೆಂಬುದನ್ನೇ ಅರಿಯದೆ ಕಂಗೆಟ್ಟ ಶನಕಾದಿಗಳು ಕುಪಿತಗೊಂಡು ಕಾದ ಕೆಂಡದಂತೆ ಹಿಸ್ಸಿಸುತ್ತಾರೆ. ಜಯ ವಿಜಯರು "ನಿದ್ರಾ ಭಂಗಂ ಮಹಾ ಪಾಪಂ—ರಹಸ್ಯ ಭಂಗಂ ಅತಿ ಮಹಾ ಪಾಪಂ ಎಂದು ಹೇಳಲು ಆ ಎಂ. ಎಲ್. ಎ. ಋಷಿಗಳು "ಜಯ—ವಿಜಯರೇ, ನೀವು ರಾಕ್ಷಸರಾಗಿ ಭೂಮಿಯ ಜನರನ್ನು ಕಾಡಿರಿ" ಎಂದು ಶಾಪ ಕೊಡುತ್ತಾರೆ. ಕೂಗಾಟದ ಗಲಾಟೆಗೆ

ಟ್ರೈಪಿಸ್ಟರು—ನಾರಾಯಣರು ಹೊರಗೆ ಬರುತ್ತಾರೆ. ಅವರು ನಿರಪರಾಧಿಗಳಾದ ಜಯ ವಿಜಯರನ್ನು ಕಾಪಾಡಲಿಲ್ಲ. ಆದರೆ, ಶನಕಾದಿಗಳ ಕೋಪಕ್ಕೆ ಹೆದರಿ ತಮ್ಮ ಕಾವಲುಗಾರರನ್ನು ಭರ್ತರ್ಫ್ ಮಾಡುತ್ತಾರೆ. ಕಾರ್ಮಿಕರ ಕಾನೂನು ಆಗ ಇರಲಿಲ್ಲವಾದ್ದರಿಂದ ಜಯ—ವಿಜಯರು ಮಂಕು ಬಡಿದ ಮಂಗಗಳಂತೆ ಭೂಲೋಕಕ್ಕೆ ಹೋಗಿ, ಐ. ಎ. ಎಸ್. ಗೆ ಸೇರಿ ಅಲ್ಲಿನ ಜನರನ್ನು ಕಾಡುತ್ತಾರೆ. ಈಗಿನ ಅಧಿಕಾರಿಗಳು ರಾಜಕಾರಣಿಗಳಿಗೆ ಹೆದರುವಂತೆ ಶನಕಾದಿಗಳಿಗೆ ಹೆದರಿ ತಮಗೆ ಅನ್ಯಾಯ ಮಾಡಿದ ಭಗವಂತನನ್ನು ನ್ಯಾಯವಾಗಿ ಧಿಕ್ಕರಿಸುತ್ತಾರೆ. ಆದರೆ, ಹೆದರಿಸುವಂತಹ ಹೆಸರುಳ್ಳ ಹಿರಣ್ಯಾಕ್ಷ—ಹಿರಣ್ಯ ಕಶಿಪುಗಳ ಈ ಧಿಕ್ಕಾರ, ತೊಂದರೆ ಅವರಿಗಾಗಿದ್ದ ಅನ್ಯಾಯಕ್ಕಿಂತ ನೂರ್ಮಡಿ ಮಿತಿ ಮೀರಿತು. ಅವರಿಗಾದ ಅನ್ಯಾಯದ ಪಾಪವಿಮೋಚನೆ ಮತ್ತು ಭೂಲೋಕದ ಭಕ್ತರುಗಳಿಗಾದ ಕಷ್ಟ ನಷ್ಟ ನಿವಾರಣೆ ಮಾಡಲು ನಾರಾಯಣನು ಪಡಬಾರದ ಪಾಡನ್ನು ಪಟ್ಟು, ಇಲ್ಲ ಸಲ್ಲದ ವೇಶ ಅವತಾರಗಳನ್ನು ಧರಿಸಿ ಕಡೆಗೆ ಕಾಡು ಹಂದಿಯಾಗಿ, ಕೊಚ್ಚೆ ಗುಂಡಿಯಲ್ಲೆಲ್ಲಾ ಒದ್ದಾಡಿ, ಬಹು ಕಷ್ಟದಿಂದ ಹಿರಣ್ಯಾಕ್ಷನನ್ನು ಹೇಗೋ ಕೊಂದುಬಿಟ್ಟನು, ಆದರೆ, ಹಿರಣ್ಯ ಕಶಿಪುವೋ—ಎಲ್ಲಾ ತಮ್ಮಂದಿರಂತೆ ಅಣ್ಣನಿಗಿಂತ ಬುದ್ಧಿವಂತನಾಗಿ ಹೇಗೋ ತಪ್ಪಿಸಿಕೊಂಡು, ಪ್ರಹ್ಲಾದ ಜನಿಸಿಪ್ರಾಯವಂತನಾಗುವ ತನಕ ಭೂಲೋಕ ವ್ಯಾಪಾರ ಅನುಭವಿಸಿದನು. ಕೊನೆಗೆ ಪ್ರಹ್ಲಾದನು ತನ್ನ ತಾಯಿಯ ಮಾಂಗಲ್ಯಕ್ಕೂ ಬೆಲೆ ಕೊಡದವನಾಗುತ್ತಾನೆ. ಸಿಂಹದವೇಷ ಹಾಕಿಕೊಂಡಿದ್ದ ಆ ನಾರಾಯಣನನ್ನು "ನರಸಿಂಹ" ಎಂದು ಈಗಲು ಎಲ್ಲೆಲ್ಲೂ ಪೂಜಿಸುತ್ತಾರೆ. ಇದು ನೀತಿಯೇ? ಇದು ಪಾಠವೇ? ಇಂತಹ ಕಥೆಯನ್ನು ಕೇಳಿದ ಕೂಸುಗಳು, ಮೀಸೆ ಬಂದಮೇಲೆ ಅವರ ಹಿರಿಯರ—ಗುರುಗಳ ಬಗ್ಗೆ ತಾತ್ಸಾರ ಜಿಗುಪ್ಸೆ ಹೊಂದುವುದು ಸರಿಯಷ್ಟೆ?

ಆದ್ದರಿಂದ ಎಲ್ಲೆಲ್ಲಿ ನೋಡಿದರೂ (ಹ) ರಾಮರಿಂದ ತುಂಬಿರುವ ಕಲಿಯುಗವು ಉದ್ಧಾರವಾಗಬೇಕಾದರೆ ಸರಿಯಾದ ನೀತಿಯನ್ನು ಮೀಸೆ ಬರದವರಿಗೆ ಮೀಸೆ ಉದುರಿದವರು ಬೋಧಿಸಲಿ. ಇಲ್ಲದಿದ್ದರೆ "ಎಲ್ಲೆಲ್ಲಿ ನೋಡಿದರೂ ಪಂಗನಾಮ"ವಾಗುತ್ತವೆ.

ಟಿ. ಕೆ. ಎಸ್. ಐಯ್ಯಂಗಾರ್,
ಭೂಗರ್ಭ ಶಾಸ್ತ್ರಿ.

---

# ಹೊಸ ಅಡುಗೂಲಜ್ಜಿ ಕತೆ

---

ಹಿಂದೆಲ್ಲಾ ಒಂದು ಊರಿನಲ್ಲಿ ಒಬ್ಬ ರಾಜ ಇರುತ್ತಿದ್ದ ಹಾಗೆ, ಈಗ ಹೊಸ ವಾತಾವರಣದಲ್ಲಿ ವಿವಿಧ ಸಹಕಾರ ಸೊಸೈಟಿಯ ಅಧ್ಯಕ್ಷರೊಬ್ಬರು ಊರಲ್ಲಿ ದರ್ಬಾರ್ ನಡೆಸುತ್ತಾ ಇದ್ದರು. ವಿವಿಧ ಸಹಕಾರ ಸೊಸೈಟಿಗೆ ಬೇಕು ಬೇಕಾದ ವಿವಿಧ ಸಾಮಾನುಗಳೆಲ್ಲವನ್ನೂ ಅವರೇ ತಮಗೆ ಅನುಕೂಲವಾದ ಕಡೆ ಕೊಂಡು ಕೊಂಡು, ಬೇಕಾದ ಹಣದ ಸೌಕರ್ಯವನ್ನು ಸರಕಾರದಿಂದ ಪಡೆದು ತಂದು, ಬಾಳಿ ಬದುಕುತ್ತಿದ್ದರು. ಅಣಿಯಾದ, ಸಂಸಾರ. ಬೆಳೆದ ಒಬ್ಬಳೇ ರೂಪವಂತೆ ಮಗಳು.

ಆದರೆ ಅದೇ ಊರಿನಲ್ಲಿ ಒಂದೇ ಪುಟದ ದಿನ ಪತ್ರಿಕೆಯೊಂದನ್ನು ಒಬ್ಬ ಬಹದ್ದೂರಿ ರಾಕ್ಷಸ ಸಾರ್ವಭೌಮನು ನಡೆಸಿಕೊಂಡು ಬರುತ್ತಿದ್ದನು. ದರ್ಬಾರ್ ನಡೆಸುವ ನಮ್ಮ ಅಧ್ಯಕ್ಷ ಮಾಡಬಯಸಿದ ಗುಟ್ಟಿನ ಲೇಣೆ—ದೇಣೆಗಳೆಲ್ಲವನ್ನೂ ಈತ ಹೇಗೋ ಕಂಡು ಹಿಡಿದು ಬಹಿರಂಗವಾಗಿ, ಚೂಪಾದ ಮಾತುಗಳಲ್ಲಿ ಕೊರೆದು ಬರೆಯುತ್ತಿದ್ದ. ಊರಿನ ದೊಡ್ಡ ದೊಡ್ಡ ದಾರಿಗಳು ಕೂಡುವ ಚೌಕದಲ್ಲಿ ದೊಡ್ಡ ಗಂಟಲಿನ ಕುಳ್ಳರ ಬಾಯಲ್ಲಿ ಕರ್ಕಶವಾಗಿ ಕೂಗಿಸುತ್ತಿದ್ದ.

"ನುಂಗಿಬಿಟ್ಟರು, ಹತ್ತು ಸಾವಿರ ನುಂಗಿಬಿಟ್ಟರು. ವಿವಿಧ ಸೊಸೈಟಿಯೋರು
ನುಂಗಿಯೇಬಿಟ್ಟರು—ಹಾವು ಕಪ್ಪೆ ನುಂಗಿದ ಹಾಗೆ ನುಂಗಿಬಿಟ್ಟರಪಾ ! !"

"ಎಂಟು ನೂರು ರೂಪಾಯಿ ಸ್ವಾಹಾ ! ಸೊಸೈಟಿ ಅಧ್ಯಕ್ಷರು—ಗೊಬ್ಬರ
ಕೊಂಡು ಗೊಬ್ಬರ ಮಾರಿ ಎಂಟು ನೂರು ಸ್ವಾಹಾ !"

"ಬಿನ್ನಿ ಬಟ್ಟೆ ಕೊಂಡರು ಸೊಸೈಟಿಯೋರು.
ತಣ್ಣೀರ್ ಬಟ್ಟೆ ಹಾಕಿದರು ಸೊಸೈಟಿ ಹೊಟ್ಟೆ ಮ್ಯಾಗೆ !"

ಈ ರೀತಿ ಕಲಾತ್ಮಕವಾಗಿ ಕೂಗಿಸಿದರು.

ಈ ರಾಕ್ಷಸನ ಹಾವಳಿಯನ್ನು ತಡೆಯಲು ಅಧ್ಯಕ್ಷರಿಗೆ ಅಸಾಧ್ಯವಾಯ್ತು. ಈ ರಾಕ್ಷಸನ ಸಂಹಾರ ಮಾಡಲು. ಅಧ್ಯಕ್ಷರಿಗೆ ಉಪಾಯ ತೋಚದೆ ಹೋಯಿತು ಕಡೆಗೆ ತಮ್ಮ ಅನುಯಾಯಿಗಳ ಮೂಲಕ ಗುಟ್ಟಿನಲ್ಲಿ ಡಂಗುರ ಹೊಡೆಸಿದರು

"ಈ ರಾಕ್ಷಸನನ್ನು ಮಟ್ಟ ಹಾಕಿದವರಿಗೆ, ಅರ್ಧ ಸಂಪಾದನೆಯನ್ನೂ ನನ್ನ ಏಕಮೇವ ಮಗಳನ್ನೂ ಕೊಡುತ್ತೇನೆ" ಎಂದು.

ಭಿಕ್ಷಾನ್ನದ ಮಂದಿರದಲ್ಲಿ ಓದಿ ಆ ವರ್ಷವೇ ಪದವೀಧರನಾದ ಯುವಕನೊಬ್ಬನಿಗೆ ಡಂಗುರ ಕೇಳಿಸಿತು. ಅಲ್ಲಿನ ತನಕ ಆತ ಹೊಟ್ಟೆ ಪಾಡಿಗೆ ಎಲ್ಲೆಡೆಗಳಲ್ಲೂ ಚಾಕರಿ ಹುಡುಕಿ ಬೇಸತ್ತಿದ್ದ. ಕಡೆಗೆ ಜ್ಯೋತಿಷ ಕಲಿಯಲಾರಂಭಿಸಿದ್ದ. ಚೂಟಿಯ ಹುಡುಗ. ಬೇಗ ಮೂರು ತಿಂಗಳಲ್ಲೇ ಕಲಿತು ತನ್ನ ಜಾತಕವನ್ನು ಪರಿಷ್ಕರಿಸಿ ಭವಿಷ್ಯ ನೋಡಿದ. ಒಂದು ತಿಂಗಳಲ್ಲಿ ಸರಸ್ವತಿಯವರ ಪ್ರಸಾದದಿಂದ ಅಂದರೆ, ಬರವಣಿಗೆಯ ಮೂಲಕ, ದಶಮಸ್ಥಾನದಲ್ಲಿ ಲಗ್ನಾಧಿಪತಿ ಕುಜ ಉಚ್ಚನಾಗಿರುವುದು ವರ್ಗೋತ್ತಮವಾಗಿರುವುದರಿಂದ, ಭಾವದಲ್ಲಿ ಅಕ್ಕನ ಮನೆಯಲ್ಲೇ ಇರುವುದರಿಂದ ಅವನೇ ದಶನಾಥನೂ, ಅಂತರ್ದಶಾನಾಥನೂ ಆಗಿರುವುದರಿಂದ, ಈಗ ಲೇಖನ ಬರೆದು ಪತ್ರಿಕೆಗಳಿಗೆ ಕಳಿಸಿದರೆ ಅದೇ ಭಾಗ್ಯದ ಹಾದಿ ಎಂದು ತಿಳಿದುಕೊಂಡ.

ಸೀಸವನ್ನು ಕರಗಿಸಿ ಮಾತುಗಳನ್ನು ಬರೆದ. ಓದಿದವರ ಕಣ್ಣು ಕೆಂಪೇರುವ ಭಾಷೆಯನ್ನು ಪಯೋಗಿಸಿದ. ನ್ಯಾಯಾಲಯಕ್ಕೆ ಸಿಕ್ಕಿಹಾಕಿಕೊಳ್ಳದ ರೀತಿ ದ್ವಂದ್ವಾರ್ಥವನ್ನಿಟ್ಟು ಬರೆದ. ರಾಕ್ಷಸನ ದಿನ ಪತ್ರಿಕೆಗೆ ಕಳುಹಿಸಿದ ಮೊದಲ ಲೇಖನ ದೊಡ್ಡಕ್ಷರಗಳಲ್ಲಿ ಪ್ರಕಟವಾಯ್ತು ಎರಡನೇ ಲೇಖನವೇ ಎರಡನೆಯ ದಿನದ ಪತ್ರಿಕೆಯ ತುಂಬಾ. ಪಾಪಿಯೆಂಬ ಗುಪ್ತ ನಾಮಧೇಯವನ್ನು ಇಟ್ಟು ಕೊಂಡೇ ಬರೆದ ಒಂದು ತಿಂಗಳು ದಿನಾಲು ಬರೆದುದಕ್ಕೆ ಮೂರು ರೂಪಾಯಿಗಳು ಸಂಪಾದನೆಯಾಗಿತ್ತು—ಮನಿಯಾರ್ಡರ್ ಮೂಲಕ—

ಆಗ ಈ ಹುಡುಗನಿಗೆ ಡಂಗುರದ ಸುದ್ದಿ ಕೇಳಿಸಿತು.

ನೇರನೆ ಅಧ್ಯಕ್ಷರ ಮನೆಗೆ ಹೋದ. "ರಾಕ್ಷಸನನ್ನು ಸಂಹಾರ ಮಾಡಲು ನನಗೆ ದೈವದತ್ತವಾದ ಅಸ್ತ್ರವಿದೆ ಆದರೆ ಆದೊಂದೇ ಅಸ್ತ್ರ ನನ್ನ ಆಸ್ತಿ. ಆದ ಕಾರಣ ಆ ಅಸ್ತ್ರವನ್ನು ಉಪಯೋಗಿಸಿದರೆ, ನಿಮ್ಮ ಮಗಳನ್ನು ನನಗೆ ಕೊಟ್ಟು ಮದುವೆ ಮಾಡುತ್ತೀರಿ. ಬಿಟಿ ಹಾಗೂ ಅರ್ಧ ಸಂಪಾದನೆ ಕೊಡುತ್ತೀರಿ ಆ ಸಂಪಾದನೆಯಲ್ಲಿ ನನಗೆ ಬರುವ ಅರ್ಧದ ಮೊತ್ತ ಎಷ್ಟು ಅಂತ ತಿಳಿದರೆ ಮುಂದಿನ ಕಾರ್ಯಕ್ರಮ ನಡೆಸುತ್ತೇನೆ" ಎಂದು ಹೇಳಿದ.

ಈ ಭೇಟಿಯ ಹಿಂದಿನ ದಿನವೇ ರಾಕ್ಷಸನ ಪತ್ರಿಕೆಯಲ್ಲಿ ಅಧ್ಯಕ್ಷರು ಸರಕಾರ ದಿಂದ, ಮೂರು ಟನ್ನು ಕಬ್ಬಿಣವನ್ನು ಕೊಂಡ ವಿಚಾರ, ಅದು ಸೊಸೈಟಿಗೆ ಬಾರದೇ ಸೊಸೈಟಿಯಲ್ಲೇ ಮೂರು ಜನರಿಗೆ ತಲಾ ಒಂದು ಟನ್ನಿನಂತೆ ಮಾರಿದ ವಿಚಾರ ವನ್ನೂ, ಹಾಡೆ ಹಗಲಲ್ಲಿ ಅದನ್ನು ಮೂರರಷ್ಟಕ್ಕೆ ರಸೀತಿ ಇಲ್ಲದೆ ಅಧ್ಯಕ್ಷರು ಮಾರಿ

ದ್ದನ್ನೂ, ವಿಧವಿಧವಾಗಿ ಬಣ್ಣಿಸಿ ಬರೆದಿತ್ತು. ಅಧ್ಯಕ್ಷರು ಆಡಲೂ ಆರದೆ ಅನುಭವಿಸಲೂ ಒಲ್ಲದೆ ಸುಸ್ತಾಗಿದ್ದರು. ಕಾರಣ ಭೇಟಿಯ ದಿನ, ಚೂಟಿಯ ಹುಡುಗನ ಲಕ್ಷಣ ಮುಖ ಕಂಡು ದಿಟ ಹೇಳಿದರು ಅರ್ಥ ಸಂಪಾದನೆ ತಿಂಗಳಿಗೆ ಒಂದು ಸಹಸ್ರ ರೂಪಾಯಿ ಎಂದು

"ಹಾಗಾದರೆ ನಿಮ್ಮ ಮಗಳನ್ನು ನೋಡೋಣ" ಅಂದ ಹುಡುಗ.

"ಊರ್ವಶೀ, ಬಾಮ್ಮ. ಯಾರೋ ಬಂದಿದ್ದಾರೆ ನಿನ್ನನ್ನು ನೋಡುಕ್ಕೆ ಅಂತ" ಅಧ್ಯಕ್ಷರು ಕೂಗಿದಾಗ, ಮನೆಯ ಅಂತರಾಳದಿಂದ ಮಾರ್ದನಿಯು ಬಂತು "ಬಂದೇ-ಅಣ್ಣಾ" ಅಂತ.

ಆ ಶಬ್ದಕ್ಕೆ ಹುಡುಗನ ಕಿವಿ ಕೊರೆದಂತಾಯ್ತು.

ಬೆಳಿಸಿದ ಉಗುರಿನಿಂದ ಗೋಡೆಯನ್ನು ಕೆರೆದರೆ ಒಂದು ರೀತಿಯ ಕರ್ಕಶ ಧ್ವನಿ ಬರುತ್ತೆ ನೋಡಿ. ಕೆರೆದವರನ್ನೂ ಗೋಡೆಯನ್ನೂ ಒಟ್ಟಿಗೆ ಹೂತುಬಿಡೋಣ ಅನ್ನಿಸುವ ಹಾಗೆ ಮಾಡುತ್ತೆ ನೋಡಿ, ಆ ಕರ್ಕಶ ಧ್ವನಿ ಮಗಳದ್ದು. ಹೆಸರು ಊರ್ವಶಿ.

ಊರ್ವಶಿ ಬಂದಳು. ಬಂದು ನಿಂತಳು. "ಇವರ್ಯಾರಣ್ಣ" ಎಂದು ತಂದೆಯನ್ನು ಕೇಳಿದಳು ತಂದೆಯು ಬಾಯಿ ತೆರೆಯುವ ಮೊದಲೇ ಹುಡುಗ ಎದ್ದ. "ಕೈಲಾಸಂ ಹೇಳ್ತಿದ್ದ ಊರ್ವಶಿ ನಮ್ಮೂರ್ರೇ ವಾಶಿ ಕಂಡಮೇಲೆ ಅಂತ ಈಗ ಅರ್ಥವಾಯ್ತು. ಜ್ಞಾನೋದಯವಾಗಲು ಸಹಾಯಮಾಡಿದ, ನೆರವನಿತ್ತ ನಿಮಗೆ ವಂದನೆಗಳು. ಕುಮಾರಿ ಊ–ರ್ವ–ಶಿ" ಎಂದು ಹೇಳುತ್ತಾ ಹೊರಬಿದ್ದ

ನೇರನೆ ರಾಕ್ಷಸನ ಪತ್ರಿಕಾಲಯಕ್ಕೆ ಹೋದ. ಸಂಪಾದಕರನ್ನು ಭೇಟಿಯಾಗಲು ಈಗ ಸಾಧ್ಯವಿಲ್ಲ ಎಂದು ಅಲ್ಲಿದ್ದ (ಅಚ್ಚು ಕೂಡಿಸುತ್ತಿದ್ದ)ವ ಹೇಳಿದ. "ಪಾಪಿ" ಬಂದಿದ್ದಾನೆ, ಅಂತ ಹೇಳು ಅವರಿಗೆ ಈಗಲೇ ನೋಡಬೇಕು ಅಂತಲೂ ತಿಳಿಸು ಎಂದು ಹುಡುಗ ಕೂಗಿದ.

"ಯಾರು? ನೀನೇ? ಪಾಪಿ!! ಚಿಕ್ಕ ವಯಸ್ಸಿನ ನೀನು ಅಷ್ಟು ಹರಿತವಾಗಿ ಬರೆಯುತ್ತೀಯಾ" ಬಾ! ಬಾ! ಮಗು!! ಅಂತ ಅಚ್ಚು ಕೂಡಿಸುತ್ತಿದ್ದವನೇ ಹುಡುಗನನ್ನು ಒಳಕೋಣೆಗೆ ಕರೆದುಕೊಂಡು ಹೋದ. "ನಾನೇ ಪತ್ರಿಕೆಯ ಸಂಪಾದಕ! ನಿಮ್ಮ ಭೇಟಿಯಿಂದ ಕೃತಾರ್ಥನಾದೆ ಏನು ಸುದ್ದಿ. ಏಕೆ ಈಗ ಪ್ರತ್ಯಕ್ಷವಾದಿರಿ" ಎಂದು ಬಹುವಚನದಿಂದ, ಮುದಿ ಮುದ್ರಾರಾಕ್ಷಸ, ಹುಡುಗನನ್ನು ಕೇಳಿದ.

ಹುಡುಗ ಹೇಳಿದ. "ನನ್ನ ಲೇಖನಗಳಿಂದ ನಿಮ್ಮ ಪತ್ರಿಕೆಯ ಹೆಸರು ಹಿರಿದಾಯ್ತು. ಬಿಸಿ ದೋಸೆಗಳಂತೆ ಮಾರಾಟವಾಗುತ್ತಿದೆ. ಆದರೂ ನನಗೆ ಸಿಗುವುದು ಮೂರೇ ರೂಪಾಯಿ, ತಿಂಗಳಿಗೆ. ನಿಮಗೆಷ್ಟು ಸಿಗುತ್ತೆ ?" ಅಂದ.

ಪತ್ರಿಕಾಲಯವನ್ನು ಕಂಡಿದ್ದೀರಿ; ಸಂಪಾದಕರೇ ಅಚ್ಚುಗೂಡಿಸುವುದನ್ನೂ ನೋಡಿದ್ದೀರಿ. ನನ್ನ ಸಂಪಾದನೆ ತಿಂಗಳಿಗೆ ಮೂವತ್ತು. ಒಂದು ಊಟ ಸಿಗುತ್ತೆ ಹಗಲಲ್ಲಿ. ಸಂಜೆ ಹುಡುಗರು ಚೌಕ ಚೌಕಗಳಲ್ಲಿ ಕೂಗುವುದನ್ನು ಕೇಳಿ ಹೊಟ್ಟೆ ತುಂಬಿಸಿಕೊಳ್ಳುತ್ತೇನೆ" ಎಂದ ಮುದಿ ಸಂಪಾದಕ, ರಾಕ್ಷಸ.

"ವಿವಿಧ ಸಹಕಾರ ಸೊಸೈಟಿ ಅಧ್ಯಕ್ಷರ ವಿಷಯ ಮಾತ್ರ ನಿಮ್ಮ ಪತ್ರಿಕೆಯಲ್ಲಿ ಬರೆಯದೆ ಇದ್ದರೆ, ನನಗೆ ಕೊಡುವ ಮೂರು ರೂಪಾಯಿಗಳನ್ನು ನೀವೇ ಉಳಿಸಿ ಕೊಳ್ಳಿ. ಇಲ್ಲವಾದರೆ ನಾನೇಬೇರೆ ಪತ್ರಿಕೆ ಶುರುಮಾಡಿ ನಿಮ್ಮ ಮಟ್ಟ ಹಾಕುತ್ತೇನೆ" ಎಂದ ಚೂಟಿಯ ಹುಡುಗ.

ಮುದಿ ಮುದ್ರಾರಾಕ್ಷಸ ಸಂಪಾದಕ, ಬೇರೆ ಉಪಾಯವಿಲ್ಲದೆ, ಆಗಲಿ ಅಂದ.

* * *

ಚೂಟಿಯ ಹುಡುಗ ಅಧ್ಯಕ್ಷರಬಳಿ ಹೋದ ತಿರುಗಿ. ಸ್ವಾಮಿ" ಅಂದ "ರಾಕ್ಷಸನ ಸಂಹಾರ ಮಾಡುತ್ತೇನೆ, ಅದಕೆ ಒಂದು ಷರತ್ತಿನಮೇಲೆ" ಅಂದ ಅಧ್ಯಕ್ಷರು ಮುಖ ಇಳಿಯಿತು. ಆ ಸೊರಗಿದ ದನಿಯಲ್ಲಿ ಏನದು ಎಂದರು.

"ನಿಮ್ಮ ಅರ್ಧಸಂಪಾದನೆ ನನಗೆ ಕೊಡಬೇಕು. ಆದರೆ ನಿಮ್ಮ ಮಗಳನ್ನು ಮದುವೆಯಾಗಲು ನನಗೆ ಸಾಧ್ಯವಿಲ್ಲ" ಅಂದ ಹುಡುಗ

"ಹಾಗಾದರೆ ನಾನು ಒಪ್ಪುವುದಕ್ಕಾಗುಲ್ಲ" ಅಂದರು ಅಧ್ಯಕ್ಷರು.

* * *

ಅದಕ್ಕೇ ಮಗು, ಈಗಲೂ ಅಧ್ಯಕ್ಷರುಗಳು ಕಾನೂನಿಗೆ ಸಿಗದೇ ಲೂಟಿ ಹೊಡೆಯುತ್ತಲೇ ಇದ್ದಾರೆ. ರಾಕ್ಷಸರು ಬಿಸಿ ಬಿಸಿ ಮುದ್ರೆಮಾಡಿ ಅವರನ್ನು ಕೊರೆಯುತ್ತಲೇ ಇದ್ದಾರೆ, ಮಲಕ್ಕೋ ಮಗು ! ಕತೆ ಕಾಡಿಗೆ ಹೋಯ್ತು, ಮಳೆ ಊರಿಗೆ ಬಂತು ಅಂತ ಅಡುಗೂಲಜ್ಜಿ ಮೊಮ್ಮಗುವನ್ನು ಮಲಗಿಸಿದಳು— ಸ್ವಾತಂತ್ರ್ಯ ಬಂದ ಮೇಲೆ —

—ಕುಮಾರ್



# ಸಿಡಿಲಮರಿ

**ಕಿರು ನಾಟಕ**

---

[ಕೆರೆ ಏದ್ದಾಗ ರಸ್ತೆಯ ದೃಶ್ಯ ಎಡ ಪಾರ್ಶ್ವದಿಂದ ಭಾರಿ ಮೀಸೆ— ಆಜಾನುಬಾಹು ದೊಡ್ಡ ಹುಬ್ಬುಗಳ ನಡುವೆ ಕುಂಕುಮ. ಕಚ್ಚೆ ಪಂಚೆಧಾರಿಯಾದ ವೀರಭದ್ರು ಬರುವನು—ಎದುರುಗಡೆ ಸೂಟು ಧರಿಸಿದ ಮಧ್ಯೆ ಬೈ ತಲೆಯ ಶಾಂತಪ್ಪ ಬರುವನು.]

ಶಾಂತಪ್ಪ—ಓ ಹೊ ಹೋ-ಏನಯ್ಯ ವೀರಭದ್ರೂ-ಶಾನೆ ಅಪುರೂಪವಾಗಿಬಿಟ್ಯಲ್ಲೋ

ವೀರಭದ್ರು—ನಮಸ್ಕಾರ ಶಾಂತಪ್ಪನೋರೆ—ನಾನೊಬ್ಬನೇ ಏನು ? ನೀವು ಕೂಡಾ ಶಾನೆ ಅಪುರೂಪವಾಗಿಬಿಟ್ರಿ.

ಶಾಂತಪ್ಪ—ಅಂತೂ ಇಬ್ರೂ ಅಪುರೂಪಾನ್ನು—ಎಲ್ಲಿದ್ದಿಯೋ ಈಗಾ ?

ವೀರಭದ್ರು—ಅಲ್ಲೇ....ಅದೇ ಕಂಪನಿಲೇ ಇದೀನಿ.

ಶಾಂತಪ್ಪ—ಅದೇ ಕಂಪನೀಲಿ ಇದ್ದಿಯೇ ?....ಅಲ್ವಯ್ಯ ಆರು ವರ್ಷದಿಂದ ಬಿಟ್ಟುಬಿಡ್ತೀನೀಂತ್ಲೇ ಹೇಳ್ತಾ ಇದ್ದೀಯಾ—! !

ವೀರಭದ್ರು—ನಿಜ ಶಾಂತಪ್ಪನೋರೇ—ಇನ್ನೂ ಟೈಮ್ ಬಂದಿಲ್ಲ. ಈ ಹಾಳು ತಾಪೇದಾರಿ—ಸಲಾಮು ಹೊಡೆಯೋದೊಂದ್ರೆ ನನಗೆ ಮೈಯೆಲ್ಲಾ ಉರಿದು ಹೋಗತ್ತೆ ನೋಡಿ. ನನ್ನ ಸ್ವಭಾವ ನಿಮಗೆ ಗೊತ್ತಿಲ್ಲ ಸಾರ್ ಯಾರಿಗೂ ನಾನು ಸೊಪ್ಪು ಹಾಕಿದೋನೆ ಅಲ್ಲ. ಯಾರಾದ್ರೂ ಏನಾದ್ರೂ ಅಂದ್ರೋ—ಹಾಗೇ ಅಲ್ಲೇ ತಿರುಗಿ ಬಿದ್ದು ಮುಖ ಮುರಿದು ಮತ್ತೆ ಉಸುರೆತ್ತರಬಾರದು ಹಾಗೆ ಮಾಡಿಬಿಡ್ತೀನಿ. (ಮೀಸೆ ತಿರುವುವನು)

ಶಾಂತಪ್ಪ—ನಿನ್ನ ಸ್ವಭಾವ ನನಗೆ ಗೊತ್ತಿಲ್ವೇ....ಹೂಂ. ಅಂತೂ ಆರು ವರ್ಷದಿಂದ ಅದೇ ಕಂಪನೀಲೆ ಇದ್ದೀಯಾಂತ ಆದಮೇಲೆ ನಿನಗೆ ಅಲ್ಲಿ ನೆಮ್ಮದಿ

ಯಾಗೇ ಇರಬೇಕೂಂತ ಆಯ್ತಿಲ್ಲ.

ವೀರಭದ್ರ—ನಾನು ನೆಮ್ಮದಿಯಾಗೇ ಇದ್ದೀನಿ ಶಾಂತಪ್ಪನೋರೇ—ನನ್ನಿಂದಾನೇ ನಮ್ಮ ಕಂಪನಿ ಸೂಪರ್‌ವೈಸರಿಗೇ ನೆಮ್ಮದಿ ಇಲ್ಲವಂತೆ. ಅದಕ್ಕೆ ನಾನೇನು ಮಾಡೋಕಾಗುತ್ತೆ—I dont-care.

ಶಾಂತಪ್ಪ—ಹ ಹ್ಹ ಹ್ಹ ಹ—ಅದು ಸರಿಯೇ—ನೀನು ಡೋಂಟ್ ಕೇರ್ ಆದರೂ ನಿನ್ನ ಕೇರ್‌ನಲ್ಲಿರೋ ಹೆಂಡ್ತಿ ಮಕ್ಕಳ ಹಿತಕ್ಕಾದರೂ, ನೀನು ನಿನ್ನ ಸೂಪರ್‌ವೈಸರಿಗೆ ಹೊಂದ್ಕೊಂಡು ಅನುಸರಿಸಿಕೊಂಡು ಹೋಗಬೇಡ ವೇನೋ.

ವೀರಭದ್ರ—I dont care for ಹೆಂಡ್ತಿ ಮಕ್ಕಳು ಆಲ್‌ಸೊ—ಹುಡುಗನಿದ್ದಾಗಲೇ ನಮ್ಮಮ್ಮ ನನ್ನ ಸಿಡಿಲು ಮರೀಂತ಼್ಲೆ ಅಂತಿದ್ಲು—ನಮ್ಮಪ್ಪನ ಹಾಗೆ ನಾನು — ನನ್ನ ಅಂತಸ್ತು — ಮರ್ಯಾದೆ— ಸ್ವಾತಂತ್ರ್ಯ ಮುಖ್ಯ ನೋಡಿ ನನಗೆ. ಇನ್ನೊಬ್ಬರಿಗೆ ಸಲಾಮು ಹೊಡಿಯೋ ದೂಂದ್ರೆ, ಬೆಂಕಿ—ಬೆಂಕಿ ಮುಟ್ಟಿದ ಹಾಗಾಗುತ್ತೆ.

ಶಾಂತಪ್ಪ—ಹೂಂ....ಅಂತೂ ನಿನ್ನ ಕಂಡ್ರೇ ನಿನ್ನ ಸೂಪರವೈಸರು ಹೆದರ್ತಾರೇನ್ನಪ್ಪ

ವೀರಭದ್ರ—ಯಾರಿಗೆ ಯಾರು ಯಾತಕ್ಕೆ ಹೆದರಬೇಕೂ ಸಾರ್— ಮೊನ್ನೆ ಅವರು ಇದ್ದಕ್ಕಿದ್ದ ಹಾಗೆ ಯದ್ವಾ ತದ್ವಾ ರೇಗಿಬಿಟ್ರು—ಸಿಕ್ಕಾಪಟ್ಟೆ ಕೂಗಾಡಿ ಎಗರ್‍ಲಾಡಿದರು—ನಾನು ಕೇರ್ ಮಾಡಿದ್ನೇನು ?....No....

ಶಾಂತಪ್ಪ—ಅಯ್ಯಯ್ಯೋ—ನೀನೂ ಅವರಿಗೆ ಯದ್ವಾ ತದ್ವಾ ಅಂದು ಬಿಟ್ಯಾ ? ಕೆಲಸ ಕಳ್ಕೋತಿ ವೀರಭದ್ರಾ.

ವೀರಭದ್ರ—I dont care—ನಾನೂ ಯದ್ವಾ ತದ್ವಾ ಅನ್ನಿಸಿಕೊಂಡುಬಿಟ್ಟೆ ಅಷ್ಟೇ !... (ಮೀಸೆ ತಿರುವುವನು)

ಶಾಂತಪ್ಪ—(ಗಟ್ಟಿಯಾಗಿ ನಕ್ಕು) ಸರಿಯಪ್ಪ—ಆಮೇಲೆ ?

ವೀರಭದ್ರ—ಯಾರದ್ದೇನು ಮುಲಾಜು ಶಾಂತಪ್ಪನೋರೇ—ಇನ್ನೊಂದು ದಿನ ಯಾರೋ ಮೂರು ಜನದ ಹತ್ತಿರ ಆಫೀಸಿನಲ್ಲಿ ಹರಟ್ತಾ ಇದ್ರು "ವೀರಭದ್ರಾ" ಅಂತ ಕೂಗಿದ ಆ ಸೂಪರವೈಸರು. ಅವನು ಕೂಗಿದ ರೀತಿನೆ ನನಗೆ ಮೈ ಉರಿ ತಂದುಬಿಡ್ತು. ಕೆಂಗಣ್ಣು ಮಾಡ್ಕೊಂಡು "ಏನು?" ಎಂದೆ. ನಾಲಕ್ಕು ಕಪ್ಪು ಕಾಫಿ ತೊಗೊಂಡು ಬಾ ಅಂತ ಹೇಳೋದೇ ಆಹಾ ! ! !

ಶಾಂತಪ್ಪ—ನೋಡಿದೆಯಾ....ನೀನೇನು ಮಾಡ್ದೆ ಅದಕ್ಕೆ ?

ವೀರಭದ್ರು—What do I care—ಇಂಥಾದ್ಕೆಲ್ಲಾ ನನಗೆ ಆಗೋಲ್ಲ. ಇದಕ್ಕೆಲ್ಲಾ ನಾನು ಒಬ್ಬರ ಮುಖಾನೇ ನೋಡೋಲ್ಲ—ಅದೇ ಸಿಟ್ನಲ್ಲಿ ಆ ಸೂಪರವೈಸರ ಮುಖದಮೇಲೆ ಹೊಡೆದ ಹಾಗೆ—ಸರಸರ ಅಂತ ಕಾಫಿ ತಂದು ಕೊಟ್ಟುಬಿಟ್ಟೆ—I dont care—ಯಾರ ಹಂಗು ಯಾಕೆ ಸಾರ್....

ಶಾಂತಪ್ಪ—(ನಕ್ಕು) ಅಬ್ಬಬ್ಬಬ್ಬ... ನಿಜವಾಗಲೂ ನೀನು ಸಿಡಿಲ ಮರೀನೆ ಕಣಯ್ಯ.

ವೀರಭದ್ರು—ಹೀಂಗೇ—ಮನೆಗೆ ಸಾಮಾನು ತಂದುಬಿಡು—ಮಗಳ ಮದುವೆ—ಅಪ್ಪನ ತಿಥಿ—ಹೆಂಡ್ತಿ ಅರತಲೆ ಶೂಲಿಗೆ ಔಷ್ಟಿ—ಹುಡುಗರ್ನ ಇಸ್ಕೂಲು ತನಕ ಬಿಟ್ಟು ಬಾ—ಅಂತ ನನ್ನ ರೇಗಸ್ತಾನೇ ಇರ್ತಾರೆ. ರೇಗಸ್ಲಿ—What do I care—ಶಾಂತಪ್ಪಾ—ಅವರ ತಲೆ ಮೇಲೆ ಹೊಡೆದ ಹಾಗೆ ಎಲ್ಲಾ ಕೆಲಸಾನೂ ಮಾಡಿಬಿಡ್ತೀನಿ—ಅದೇನು ಮಾಡ್ತಾರೋ ಮಾಡ್ಲಿ....

ಶಾಂತಪ್ಪ—ಅಬ್ಬಬ್ಬ—ಕಂಪನೀಲೇ ಈ ಪಾಟಿ ಜೋರು—ಜಬರದಸ್ತಿ ಅಂದ್ರೆ ಇನ್ನೂ ಮನೇಲಿ ಹೆಂಡ್ತಿ ಹ್ಯಾಗೆ ಏಗ್ತಾಳೋಪ್ಪ ನಿನ್ನ ಹತ್ತಿರ.

ವೀರಭದ್ರು—I dont care ಅಂತ ಆಗ಼್ಲೇ ಅಂದುಬಿಟ್ನೆಲ್ಲಾ ಶಾಂತಣ್ಣೋರೇ—ಅವಳೂ ಅಷ್ಟೆ—ಅವರಪ್ಪನೂ ಅಷ್ಟೆ. ಯಾರಾದರೇನು ಲೆಖ್ಖಾಚಾರಕ್ಕೆ. ಅಲ್ಲಾ ಸಾರ್—ಬಂದ ಸಂಬಳಾನೆಲ್ಲಾ ನನ್ನ ಕೈಗೇ ಹಾಕಿಬಿಡಿ—ನಿಮಗೆ ಸರಿಯಾಗಿ ಸಂಸಾರ ತೂಗಿಸೋಕೆ ಬರೋಲ್ಲ ಅಂತ ರೇಗಿದಳು.

ಶಾಂತಪ್ಪ—ನೋಡಿದೆಯಾ! ಚೆನ್ನಾಗಿ ಬುದ್ಧಿ ಕಲಿಸಬೇಕಾಗಿತ್ತು ನೀನು

ವೀರಭದ್ರು—ಬುದ್ಧಿ ಕಲಿಸ್ದೇ ಇದ್ರೆ ಆಗುತ್ತ್ಯೆ—ಇಲ್ದೆ ಇದ್ರೆ ತಲೆ ಮೇಲೆ ಕೂತು ಬಿಡ್ತಾರೆ—'I dont care ಅದೇನು ಮಾಡ್ತಿಯೋ ಮಾಡ್ಕೊ' ಅಂತ ಬಂದ ಸಂಬಳಾನೆಲ್ಲಾ ಅವಳ ಕೈಲೇ ಎಸೆದುಬಿಟ್ಟೆ—What do I care ಶಾಂತಪ್ಪನೋರೇ ...

ಶಾಂತಪ್ಪ—ಹ್ಹಹ್ಹಹ್ಹ....ಒಳ್ಳೇ ಕೆಲಸಮಾಡ್ದೆ — ಸಿಡಿಲ ಮರೀಂದ್ರೆ ನೀನೇ — ಎಲ್ರನ್ನೂ ಹೆದರಿಸಿ ಸಿಡಿಲ ಮರಿಯಂಥ ವ್ಯಕ್ತಿತ್ವಾನೂ ಉಳಿಸಿಕೊಂಡು ಬಂದಿದ್ದೀಯಲ್ಲಾ....ನೀನೇ ಗಂಡು ಕಣೋ....ಭೇಷ್.

ವೀರಭದ್ರ—ಅಷ್ಟಲ್ಲಿ ಇದ್ರೆ ಇವರುಗಳು ಹೆಚ್ಚಿಕೊಂಡುಬಿಡ್ತಾರೆ—ಹೊ ಹೋ — ನೋಡಿ ಹೀಗೆ ಮಾತಾಡ್ತಾ ನಿಂತೆ — ಹೊತ್ತಾಯ್ತು. ಶಾಂತಪ್ಪ ನೋರೇ ನಮ್ಮ ಸೂಪರ ವೈಸರು Boot Polish ತೊಗೊಂಡು ಬಾ ಅಂತ ಕಳಿಸಿದ್ರು—I dont care ಬೇಗ್ನತಂದು ಕೊಟ್ಟುಬಿಡ್ತೀನಿ ಬರ್ಲಾ....ನಮಸ್ಕಾರ....(ಸರಸರನೆ ಹೋಗುವನು).

ಶಾಂತಪ್ಪ—(ನಗುತ್ತಲೇ) ಅಯ್ಯೋ ಪ್ರಾಣೀ ! ನಿನ್ನ ಕರ್ಮ....(ಹೊರಡುವನು).

— ತೆರೆ —

—ದಾಶರಥಿ ದೀಕ್ಷಿತ್.

---




ಪ್ರಭೋ ! ನನ್ನ ಹಕ್ಕು ಬಾಧ್ಯತೆಗೆ ಲೋಪವುಂಟಾಗಿದೆ.. ನನ್ನ ಕರ್ತವ್ಯಕ್ಕೆ ವಿಘ್ನವುಂಟಾಗಿದೆ —ಮನುಷ್ಯ ಜೀವ ಸಹಿತವಾಗಿ, ದೇಹ ಸಹಿತವಾಗಿ ಪರಲೋಕ ಯಾತ್ರೆ ಮಾಡಲಿಕ್ಕೆ ಹತ್ತಿದ್ದಾನೆ!

# ಥೂ ನಿಮ್ಮ!

---

"ಲೇ ಬಾರೆ ಇಲ್ಲಿ"

"ಓ"

"ಬಾರೆ ಇಲ್ಲಿ"

"ಯಾಕೇಂದ್ರೆ....?"

"ಇಲ್ಲಿ ಬಂದು ನೋಡು"

"ಥೂ... ಇಲ್ಲಿ ಹಾಲು ಕುದಿತಾ ಇದೆ ಯಾಕೇಂದ್ರೆ....?"

"ಇಲ್ಲಿ ಬಾ ಅಂತೀನಿ"

"ಇಗೋ ಬಂದೆ ..."

"ಅಲ್ನೋಡು ...ನನ್ನ ಸ್ನೇಹಿತ ಶಂಕರು—ಬಹಳ ಪ್ರೀತಿಸ್ತೀನೆ ಅಂತಿದ್ದನಲ್ಲ ಯಾರೋ ಹುಡುಗೀನ ಆ ಹುಡುಗಿ ಓ ಅಲ್ಲಿ ಹೋಗ್ತಿದಾಳೆ ನೋಡು"

"ಆಂ ಎಲ್ಲಿ .. ಆ ಕಡೆ ತಿರುಗಿದಳೆ ? ನೋಡಿಬಿಟ್ಟು ಬರ್ತೀನಿ"

"ನೋಡಿದೆಯೆನೆ ?"

"ಥೂ ನಿಮ್ಮ"

"ಥೂ ನಿಮ್ಮ ?"

"ಹೌದು ಥೂ ನಿಮ್ಮ"

"ಅಯ್ಯೋ, ಯಾತಕ್ಕೆ ?"

"ಥೂ ನಿಮ್ಮ ಬುದ್ಧಿಗೆ...."

"ಯಾಕೆ ಮಹರಾಯಗಿತ್ತಿ ?"

"ಯಾಕಂತೆ !....ಅಲ್ಲಿ ಹೋಗ್ತಿರೋದು ಶಂಕರರಾಯರ ಹೆಂಡತಿ...."

"ಆಗಬಾರದೆ ?"

"ಥೂ ನಿಮ್ಮ"

"ಶಂಕರೂ ಪ್ರೀತಿಸೋ ಹುಡುಗಿ ಅಲ್ವೇನೆ ಅದು ?"

"ಥೂ ನಿಮ್ಮ ! ಹಾಲೆಲ್ಲ ಉಕ್ಕಿ ಹೋಗಿರಬೇಕ."

"ಅಯ್ಯೋ ಗ್ರಹಚಾರವೆ !"

"ಥೂ ನಿಮ್ಮಾ S S S S S S S"

—ರಾಮಿ.

**30—1—59 ರಿಂದ ಅಮೋಘ ಪ್ರಾರಂಭ**

ಬೆಂಗಳೂರು— ಸೂಪರ್-ಮಿನರ್ವ

ಹಾಸನ— ಇಂಪೀರಿಯಲ್

ಗೀತಾ ರವರ

# ಅತ್ತಿಗೆ

ಕನ್ನಡ

ವರಲಕ್ಷ್ಮಿ. ರಾಮಗೋಪಾಲ್

[ಪ್ರಕಾಶ್ ಚಿತ್ರ]

ದಿಗ್ದರ್ಶನ
ಕೆ.ಎಸ್. ಪ್ರಕಾಶ್‌ರಾವ್

SPS

ಮುಂದಿನ ಬದಲಾವಣೆ—

ಪ್ರ ಭು ದೇ ವ — ಮೈಸೂರು

ರಾಜ್ಯದ ಇತರ ಕೇಂದ್ರಗಳಲ್ಲಿ ಬೇಗನೆ ತೆರೆಗೆ ಬರಲಿದೆ.

ಹಂಚಿಕೆ—ವಿಕ್ರಮ್ ಪಿಕ್ಚರ್ಸ್, ಬೆಂಗಳೂರು-9

# ಕೊರವಂಜಿ

**ಬಳೇಪೇಟೆ, : : ಬೆಂಗಳೂರು-9**



ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೩·೦೦

ಬಿಡಿ ಪ್ರತಿ ಕೇವಲ **25** ನಯೆ ಪೈಸೆ



ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ,

ಕೂಡಲೆ ನಮಗೆ ತಿಳಿಸಿದರೆ ಬಹಳ ಸಹಾಯ ಮಾಡಿದಂತಾಗುವುದು.

For 3 way Beauty Treatment....










RAJA

SNOW

AMLA HAIR OIL, KASTURI SOAP

MANYAM & CO. BANGALORE MADRAS MADURAI BOMBAY

FAS

REG. NO. M. 4718 KORAVANJI. FEB. 1959



Printed by B. S. Iyengar Bangalore City
Publisher—B. N. Gupta. Editor—M. Sivaram.